# ಕಾಯಕವೀರ

## ಮೋಳಿಗೆಯ
## ಮಾರಯ್ಯ-ಮಹಾದೇವಿಯರ ಚರಿತ್ರೆ



ಮೋಳಿಗೆಯ ಮಾರಿತಂದೆಗಳ ಪ್ರಸಾದದಿಂದ
ಕಾಯದ ಕಳವಳವನಳಿದು ಕರ್ಮನಿರ್ಮಲನಾಗಿ
ವೀರಮಾಹೇಶ್ವರನಾದೆನು ನೋಡಾ...............

—ನಿರಂಜನ ಚಕ್ರವರ್ತಿ,
ತೋಂಟದ ಶ್ರೀ ಸಿದ್ಧಲಿಂಗ ಶಿವಯೋಗಿ



ಲೇಖಕರು :
**ಲಕ್ಕಪ್ಪ ಅ. ಶಿರಹಟ್ಟಿ**

೧೯೭೩.

ಪ್ರಕಾಶಕರು :
ಶಶಿಧರ ಶಿ. ಶಿರಹಟ್ಟಿ
ಅರುಣೋದಯ ಪ್ರಕಾಶನ
ರಾಮಪ್ರಸಾದಗಲ್ಲಿ ವಿಜಾಪುರ



ಹಕ್ಕುಗಳು–ಲೇಖಕರವು.
ಪ್ರತಿಗಳು– ೧೦೦೦
ಬೆಲೆ– ೨ ರೂ.



ಅಚ್ಚು ಮಾಡಿದವರು :
ಶ್ರೀ ಶಿವಯೋಗೀಶ್ವರ ಮುದ್ರಣಾಲಯ, ವಿಜಾಪುರ
ವ್ಯವಸ್ಥಾಪಕರು : ಶ್ರೀ ಮು. ಚ. ಕೋರಿ.

# ಅರ್ಪಣೆ



ಲಿಂ. ಪೂಜ್ಯ ಶ್ರೀ ಸಂಗನಬಸವೇಶ್ವರ ಶಿವಯೋಗಿಗಳು

ಬಂಥನಾಳ

ಅವರ ಅಡಿದಾವರೆಗಳಿಗೆ

ಈ ಕೃತಿಕುಸುಮವನ್ನ ಸಮರ್ಪಿಸಿದೆ.



ಪೂಜ್ಯ ಸದ್ಗುರು ಶ್ರೀ ಶಾಂತವೀರ ಮಹಾಸ್ವಾಮಿಗಳು
ಹಿರಿಯಮಠ ಬಬಲೇಶ್ವರ
ಅವರ ಸನ್ನಿಧಿಯಲ್ಲಿ ಲಕ್ಕಪ್ಪ ಅ. ಶಿರಹಟ್ಟಿ

# ಮುನ್ನುಡಿ

ಹಿರಿಯರಾದ ಶ್ರೀ ಲಕ್ಕಪ್ಪ ಶಿರಹಟ್ಟಿಯವರ ಕಾಯಕವೀರ ಗ್ರಂಥಕ್ಕೆ ಮುನ್ನುಡಿ ಬರೆಯುವ ಅರ್ಹತೆ, ಆಳವಾದ ಅಭ್ಯಾಸ, ಅಪಾರವಾದ ಅನುಭವಗಳು ನನ್ನಲ್ಲಿಲ್ಲ ಎಂಬ ಅರಿವು ನನಗಿದೆ. ಆದರೆ ಅವರ ಸೌಜನ್ಯಸ್ವಭಾವ, ಶರಣ ಸಾತ್ವಿಕ ಜೀವನ, ಶರಣ ಸಾಹಿತ್ಯವನ್ನು ಕುರಿತು ಗ್ರಂಥ ಬರೆವ ಕಲಿತನಗಳ ಕಾರಣಕ್ಕಾಗಿ, ಮತ್ತು ಈಗಾಗಲೇ ಅವರ 'ಬಸವರಾಜದೇವರು' ಮತ್ತು 'ಕ್ರಾಂತಿ ಗಂಗೋತ್ರಿ' ಗ್ರಂಥಗಳಿಗೆ ಮಾರು ಹೋದುದಕ್ಕಾಗಿ ಮಾತ್ರ ಅವರ ಗ್ರಂಥಕ್ಕೆ ಮುನ್ನುಡಿಯ ತಿಲಕವನ್ನಿಡಲು ಸಂತೋಷಪಡುತ್ತೇನೆ. ಅದಕ್ಕಿಂತಲೂ ಹೆಚ್ಚಾಗಿ ಮೊದಲ ಓದುಗನಾಗುವ ಅವಕಾಶ ದೊರೆತುದಕ್ಕೆ ಅತೀವ ಆನಂದಪಡುತ್ತೇನೆ.

ವಚನ ಸಾಹಿತ್ಯವು, ವಿಶ್ವಸಾಹಿತ್ಯಕ್ಕೆ ಕನ್ನಡವು ಇತ್ತ ಅಮೌಲ್ಯ ಮತ್ತು ಅಪೂರ್ವ ಕಾಣಿಕೆಯಾಗಿದೆ. ವಚನ ಸಾಹಿತ್ಯ ಪ್ರವಾಹದ ಪಾತ್ರ ಅಪಾರವಾದಂತೆ ಆಳವೂ ಆಗಿದೆ. ಇದಲ್ಲದೆ ಪವಿತ್ರತಮವಾಗಿ ಪರಿಗಣಿಸಲ್ಪಟ್ಟದ್ದು ವಿಶೇಷವಾಗಿದೆ. ಕವಿಗಳಾಗಿ ಕಾಲ್ಪನಿಕ ದೃಷ್ಟಿಯಿಂದ ಕಾವ್ಯಗಳನ್ನು ಹೆಣೆಯದೆ, ಅರಿವಿನಿಂದ ಮೆರೆದವರಾಗಿ, ಮರೆವಿನಿಂದ ದೂರಾದವರಾಗಿ, ಅನುಭವದ ಆರ್ದ್ರ ಹೃದಯದಿಂದ ಹಂಬಲಿಸಿ ಹಾಡಿದ ಶಿವಶರಣರು ವಚನ ಸಾಹಿತ್ಯದ ನಿರ್ಮಾತೃಗಳಾಗಿದ್ದಾರೆ. ದಿವ್ಯಜ್ಞಾನಿ ಪ್ರಭುದೇವರ ಘನ ಅಧ್ಯಕ್ಷತೆಯಲ್ಲಿ, ಭಕ್ತಿಭಾಂಡಾರಿ ಬಸವಣ್ಣನವರ ನೇತೃತ್ವದಲ್ಲಿ, ಷಟ್‌ಸ್ಥಲ ಚಕ್ರವರ್ತಿ ಚೆನ್ನಬಸವಣ್ಣನವರ ವ್ಯವಸ್ಥಾಪಕತ್ವದಲ್ಲಿ, ಸುವ್ಯವಸ್ಥಿತವಾಗಿ ಸ್ಥಾಪಿತಗೊಂಡ ಅನುಭವ ಮಂಟಪದಲ್ಲಿ, ವಚನಗಳ ವಿಚಾರದ ಮಂಥನವಾಗಿ, ಕೊನೆಯಲ್ಲಿ ಲೋಕೋದ್ಧಾರ ಭಾವನೆಯ ಹಿನ್ನೆಲೆಯಲ್ಲಿ ಸ್ವೀಕೃತವಾದ ವಚನಗಳು ಕನ್ನಡ ಸಾಹಿತ್ಯದ ಕನ್ನಡನಾಡಿನ ಅಕ್ಷಯ ನಿಧಿಯಾಗಿ ಉಳಿದುಕೊಂಡು ಬಂದಿವೆ. ಇಂಥ ಸಾಹಿತ್ಯಸೇವೆಯನ್ನು ಮಾಡಿದವರಲ್ಲಿ ಕಾಶ್ಮೀರದ ಮಾಂಡವ್ಯಪುರದ ರಾಜ ಮಹಾದೇವ ಭೂಪಾಲನ ಸ್ಥಾನ ಸುಭದ್ರವಾಗಿದೆ.

# IV

ಹನ್ನೆರಡನೆಯ ಶತಮಾನದಲ್ಲಿ ಸಮಗ್ರಭಾರತದಲ್ಲೆಲ್ಲ ವಿಚಾರಕ್ರಾಂತಿಯನ್ನು ಮಾಡಿದ ವಚನ ಸಾಹಿತ್ಯದ ಮನೋಭಾವ ಸಕಲ ಜೀವಾತ್ಮರಿಗೆ ಲೇಸನೇ ಬಯಸುವುದಾಗಿದೆ. ಅಂತೆಯೇ, ಕುಲ-ಬಲ-ಲಿಂಗ-ಅಧಿಕಾರ-ಉದ್ಯೋಗಗಳಲ್ಲಿಯ ಮೇಲುಕೀಳುಗಳನ್ನು ಕಳೆದುಹಾಕಿ, ಸರ್ವರಲ್ಲಿ ಸಮತಾವಾದವನ್ನು ಸಾಧಿಸಿ, ದೇಶ-ಸಮಾಜಗಳನ್ನು ಸರ್ವೋದಯದ ಮಾರ್ಗದಲ್ಲಿ ತಂದ ವಚನಸಾಹಿತ್ಯದ ಆಕರ್ಷಣೆಗೆ ಹಾಗೂ ಆ ಧರ್ಮಧುರೀಣರಾದ ಶರಣರ ಸಾತ್ವಿಕ ಸದಾಚಾರ ಜೀವನದ ಚುಂಬಕ ಶಕ್ತಿಗೆ ಒಳಗಾದವರಲ್ಲಿ ಮಹಾದೇವ ಭೂಪಾಲನ ಜೀವನ ಚರಿತ್ರೆ ಅತ್ಯಂತ ಅಭ್ಯಸನೀಯವಾಗಿದೆ.

ವಚನ ಸಾಹಿತ್ಯಕ್ರಾಂತಿಯ ಮೂಲ, ಕಾಯಕದ ವಿಕಾಸವೇ ಆಗಿದೆ. ಶರಣರ ಜೀವನವನ್ನು ಸೂಕ್ಷ್ಮವಾಗಿ ವಿಚಾರಿಸಿದರೆ ನಾವು ಕಾಯಕದ ಮಹತ್ವವನ್ನು ಅರಿಯಬಹುದಾಗಿದೆ. ಕಾಯಕಕಲಿಯಾಗಿ, ಮೋಳಿಗೆಯ ಮಾರಯ್ಯನೆನಿಸಿದ ಕಾಶ್ಮೀರದ ಮಹಾದೇವ ಭೂಪಾಲನ ಜೀವನ ಚರಿತ್ರೆ ಅತ್ಯವಶ್ಯವಾಗಿತ್ತು. ಈಗ ಕಾಯಕವೀರ ಮೋಳಿಗೆ ಮಾರಯ್ಯನ ಜೀವನ ಚರಿತ್ರೆಯನ್ನು ಬರೆದ ಕಾಯಕವೀರ ಶ್ರೀ ಲಕ್ಕಪ್ಪ ಶಿರಹಟ್ಟಿಯವರು ಅಭಿನಂದನೀಯರಾಗಿದ್ದಾರೆ ದೇಶ-ಕೋಶ, ಭೋಗಭಾಗ್ಯಗಳನ್ನೆಲ್ಲ ಅದರೊಂದಿಗೆ ತನ್ನ ಹಾಗೂ ತನ್ನ ಸತಿಯ ಪೂರ್ವನಾಮಗಳನ್ನು ಧಿಃಕ್ಕರಿಸಿ, ಇಳಿವಯಸ್ಸಿನಲ್ಲಿ ಕನ್ನಡ ನುಡಿ ಹಾಗೂ ಸಾಹಿತ್ಯದಲ್ಲಿ ಆಸಕ್ತಿ ವಹಿಸಿ ಅಭ್ಯಾಸಮಾಡಿ, ಅನುಭವ ಮಂಟಪದ ಜ್ಞಾನ ವಿತರಣದಲ್ಲಿ ವೀರ ದಾಸೋಹಿಯಾಗಿ, ಬಹುದೀರ್ಘ ಜೀವನವನ್ನು ಬಾಳಿದ ಮಾರಯ್ಯನ ವಾಸ್ತವಿಕ ಜೀವನದ ಅಂಶಗಳನ್ನು ಯಥಾರ್ಥವಾಗಿ ಮತ್ತು ಅರ್ಥವತ್ತಾಗಿ ಗ್ರಂಥಕರ್ತರು ಚಿತ್ರಿಸಿದ್ದಾರೆ. ಮಾರಯ್ಯನ ಲಿಂಗದೀಕ್ಷೆ ಹಾಗೂ ಕರ್ನಾಟಕ ಕಾಶ್ಮೀರಗಳ ಸಂಬಂಧಗಳನ್ನು ಆಕರ್ಷಕವಾಗಿ ಚಿತ್ರಿಸಿದ್ದಾರೆ. ಈ ಕಾರಣಗಳಿಂದಾಗಿ ನಾನು ಅವರನ್ನು ಮನಸಾರೆ ಇನ್ನೊಮ್ಮೆ ಅಭಿನಂದಿಸುತ್ತೇನೆ. ಮತ್ತು ಶರಣ ಸಾಹಿತ್ಯದ ಸವ್ಯಸಾಚಿಗಳಾದ ಫ. ಗು. ಹಳಕಟ್ಟಿಯವರು ಶಿವೈಕ್ಯರಾದ ನಂತರ ವಿಜಾಪುರದ ಈ ಭಾಗದಿಂದ, ಆ ಸಾಹಿತ್ಯಸೇವೆಗೆ ಬರಗಾಲ ಆವರಿಸಿತ್ತು. ಅಲ್ಲದೆ ಶರಣರೆಂದೊಡನೆ ನಾಲ್ಕಾರು ಜನರ ಹೆಸರುಗಳು ಮಾತ್ರ ಕಣ್ಣು ಮುಂದೆ ಬಂದು, ಅವರ ವ್ಯಕ್ತಿತ್ವ ಚಿತ್ರಣ ಸ್ಮೃತಿಪಥದಲ್ಲಿ ಸುಳಿದಾಡುತ್ತದೆ. ಉಳಿದ ಹಲವಾರು

ಶಿವಶರಣರ ಹೆಸರುಗಳು ಜನಸಂಪರ್ಕದಿಂದ ದೂರಾಗಿವೆ. ಅವರ ವ್ಯಕ್ತಿಗತ ಚರಿತ್ರೆಯಂತೂ ದೂರದ ಮಾತಾಗಿರುತ್ತದೆ. ಅಂಥ ಚರಿತ್ರೆಗಳ ಅವಶ್ಯಕತೆ ಹೆಚ್ಚಾಗಿದೆ. ಕನ್ನಡ ಸಾಹಿತ್ಯದಲ್ಲಿ ಈ ಪ್ರಕಾರದ ಕೊರತೆಯನ್ನು ತುಂಬಿಕೊಟ್ಟ ಶ್ರೀಮಾನ್ ಶಿರಹಟ್ಟಿಯವರು 'ಬಸವರಾಜದೇವರು' 'ಕ್ರಾಂತಿಗಂಗೋತ್ರಿ' ಹಾಗೂ 'ಕಾಯಕವೀರ' ಗ್ರಂಥಗಳನ್ನು ಬರೆದು, ಆಧುನಿಕ ಹಳಕಟ್ಟಿಯವರಾಗಿದ್ದಾರೆಂದರೆ ಅತಿಶಯೋಕ್ತಿಯಾಗದು.

ಗ್ರಂಥದಲ್ಲಿ ಅಲ್ಲಲ್ಲಿ ಕೆಲವು ಅಲ್ಪದೋಷಗಳು ನುಸುಳಿಕೊಂಡು ಬಂದಿವೆ. ಆರನೆಯ ಪುಟದಲ್ಲಿ, ರಾಷ್ಟ್ರಕೂಟ ರಾಜರ ಆಶ್ರಯದಲ್ಲಿ ಅನುಭವಾಮೃತ ರಚಿಸಿದ ಮಹಾಲಿಂಗರಂಗನು ಕಾಶ್ಮೀರದವನಂತೆ-ಎಂದು ಹೇಳಿದುದು ಕಾಲ ದೃಷ್ಟಿಯಿಂದ ವಿಪರ್ಯಾಸಕ್ಕೆಡೆಗೊಡುತ್ತದೆ. ಹದಿನೇಳನೆಯ ಶತಮಾನದ ಕವಿಯನ್ನು, ಒಂಭತ್ತನೆಯ ಶತಮಾನದಲ್ಲಿ ತಂದುದರ ಆಧಾರ ಹಾಗೂ ಅವಶ್ಯಕತೆಗಳು ಅರ್ಥವಾಗುವಂತಿಲ್ಲ. ಮಾರಯ್ಯನ ಅಂತರಿಕ ವೇದನೆಯ ಸ್ಪಷ್ಟಕಾರಣಗಳು ವ್ಯಕ್ತವಾಗಿಲ್ಲ. ಮತ್ತು ಪಾತ್ರದ ಉತ್ತರಭಾಗ ಸಪ್ಪೆಯಾಗಿದೆ. ಆದರೂ ಸಮಗ್ರದೃಷ್ಟಿಯಿಂದ ಪುಸ್ತಕವನ್ನು ನಿರೀಕ್ಷಿಸಿದರೆ' ಕೃತಿಯು ಕೇವಲ ಕಲ್ಪನೆಯ ಬಣ್ಣಗಳಿಂದ ತುಂಬಿದೆ, ಗ್ರಂಥಕರ್ತರ ಆಳವಾದ ಅಭ್ಯಾಸ ಹಾಗೂ ಐತಿಹಾಸಿಕ ಆಧಾರಗಳಿಂದ ಒಡಗೂಡಿದ್ದು ಕಂಡುಬರುತ್ತದೆ. ಅಂತೆಯೇ ಅವರ ಹಲವಾರು ಕೃತಿಗಳು ಇನ್ನೂ ಹೊರಬರಲೆಂದು ಹಾರ್ದಿಕವಾಗಿ ಹಾರೈಸುತ್ತೇನೆ.

ವಿಜಾಪುರ
೮-೮-೧೯೭೩

ಪ್ರಾ|| ಸಂಗಮನಾಥ ಜಿ. ಹಂಡಿ M. A.
ಪ್ರಾಧ್ಯಾಪಕ ಮತ್ತು ಕನ್ನಡ ವಿಭಾಗದ ಪ್ರಮುಖ
ನ್ಯೂ ಆರ್ಟ್ಸ ಕಾಲೇಜ, ವಿಜಾಪುರ

# ಲೇಖಕನ ನಿವೇದನೆ

ಶರಣಸಾಹಿತ್ಯಕ್ಕೆ ನನ್ನ ಗಮನ ಹರಿದುದು ಶ್ರೀಗುರುಕೃಪೆಯಿಂದ. ಶರಣರು ಜನಜೀವನವನ್ನು ಪರಿಶುದ್ಧಗೊಳಿಸಿ ಅದನ್ನು ಚಿರಶಾಂತಿಯಲ್ಲಿ ಸಮರಸಗೊಳಿಸಲು ಯತ್ನಿಸಿದವರು. ಆ ಯತ್ನಕ್ಕೆ ಅವರ ಜೀವನವೇ ಪ್ರಯೋಗಶಾಲೆಯಾಯಿತು. ಅಲ್ಲಿ ಕಂಡ ತತ್ವಾರ್ಥಗಳನ್ನು ಅವರು 'ಅನುಭವಮಂಟಪ'ದ ವಿಚಾರ ಮಂಥನದಲ್ಲಿ ಪರಿಶೀಲನಗೊಳಿಸಿ ವಚನಗಳಲ್ಲಿ ಉದ್ಗರಿಸಿದರು. ಆ ವಚನಗಳು ಎಂದೆಂದಿಗೂ ನಮ್ಮ ಆತ್ಮೋನ್ನತಿಗೆ ಬೆಳಕಾಗಿವೆ. ಶರಣರ ಪರಿಪೂರ್ಣ ಚಾರಿತ್ರ್ಯದಲ್ಲಿ, ಅವರ ವಚನಸಾಹಿತ್ಯದಲ್ಲಿ ತನ್ಮಯತೆ ಪಡೆದರೆ ಅದೊಂದು ಜನ್ಮಸಾರ್ಥಕತೆಯೆಂದು ನನ್ನ ಭಾವನೆ!

ನಮ್ಮ ವಿಭೂತಿಪುರುಷರನ್ನು ಅಲೌಕಿಕರನ್ನಾಗಿಸುವ ಭರದಲ್ಲಿ ಪುರಾಣಗಳು ಅವರನ್ನು ಪವಾಡಕಥನದಲ್ಲಿ ಬಂಧಿಸಿ ಜನಸಾಮಾನ್ಯರಿಂದ ದೂರವಿರಿಸಿವೆ. ಅಲ್ಲಿಂದ ಆ ಮಹಾತ್ಮರ ಸಹಜ ಹಾಗು ವಾಸ್ತವಿಕವಾದ ಜೀವನ ಚಾರಿತ್ರ್ಯವನ್ನು ಹೊರತಂದು, ಮಾನವನು ದೇವನಾಗುವ ಅವರ ಮಹದಾದರ್ಶಗಳನ್ನು ಶ್ರೀ ಸಾಮಾನ್ಯರಿಗೆ ಮನರಂಜನೆಯೊಡನೆ ಮುಟ್ಟಿಸುವ ಉದ್ದೇಶವನ್ನು ಹೊಂದಿ, ನಾನು–ಸ್ವಸಾಮರ್ಥ್ಯದ ಇತಿಮಿತಿಯ ಅರಿವುಕೂಡ ಇಲ್ಲದೆ- 'ಬಸವರಾಜದೇವರು', 'ಕ್ರಾಂತಿಗಂಗೋತ್ರಿ' ಗ್ರಂಥಗಳನ್ನು ಬರೆದೆನು. ಅವುಗಳು ಸುಹೃದಯರಿಂದ ಪಡೆದ ಮೆಚ್ಚುಗೆಯ ಪ್ರಮಾಣ ಏನೇ ಇರಲಿ, ಅವುಗಳ ರಚನೆಯಲ್ಲಿ ನಾನು ಅನುಭವಿಸಿದ ಆನಂದ ಅಮೌಲ್ಯವಾದುದು. ಆ ಅನುಭವಾನಂದಗಳಿಗಾಗಿಯೇ ಮೋಳಿಗೆಯ ಮಾರಯ್ಯನವರ ಚರಿತ್ರೆ ಬರೆದಿದ್ದೇನೆ. ಇನ್ನುಳಿದ ಮೇಲ್ಕಾಣಿಸಿದ ಉದ್ದೇಶಗಳು ಕಿಂಚಿತ್ ಸಾಧಿಸಿದರೆ ಸಾಧಿಸಲಿ. ಬಸವಣ್ಣನವರ ಕಾಲದಲ್ಲಿ ಅವರ ನೇತೃತ್ವದಲ್ಲಿ ಶಿವಶರಣ–ಶರಣೆಯರಿಂದ ನಡೆದ, ಕಾಯಕನಿಷ್ಠವಾದ ನೂತನ ವಿಚಾರ ಕ್ರಾಂತಿಯಲ್ಲಿ, ಹಾಗೂ ಅದರಲ್ಲಿಯೇ ತಾತ್ವಿಕಾದರ್ಶಗಳನ್ನು ಪ್ರಚುರಪಡಿಸಿದ ಸುಸಂಘಟಿತ ಆಂದೋಲನದಲ್ಲಿ ಒಂದು ಮಹತ್ವದ ಪಾತ್ರವಾಡಿದ ಮೋಳಿಗೆಯ ಮಾರಯ್ಯನ

ವರ ಚರಿತ್ರೆ ರೂಪಿಸಬೇಕೆಂದು ನನ್ನ ಮನಸ್ಸಿಗೆ ಹೊಳೆದುದೇ ಸಂತೋಷದ ಸಂಗತಿಯಾಯಿತು. ಅವರ ನೈಜಜೀವನವನ್ನು ಶಬ್ದಚಿತ್ರದಲ್ಲಿ ರೂಪಿಸಲು ಯತ್ನಿಸಿದ್ದೇನೆ. ಕೃತಿಯ ಗುಣಾವಗುಣಗಳ ಚಿಂತೆ ನನಗಿಲ್ಲ.

ಮಾರಯ್ಯ–ಮಹಾದೇವಿಯರ ಸಾಧಕಜೀವನವು ಎರಡು ಅತಿಮಹತ್ವದ ಘಟನೆಗಳಲ್ಲಿ ಅಡಕವಾಗಿದೆ. ಸಕಲಭೋಗಗಳ ನಿರಾತಂಕ ರಾಜವೈಭವದಲ್ಲಿದ್ದವರಲ್ಲಿ ತೀಕ್ಷ್ಣವೈರಾಗ್ಯವುಂಟಾದುದೊಂದು. ಮಧ್ಯವಯಸ್ಸು ಮಿಕ್ಕಿದ ಬಳಿಕ ತಾಯ್ನುಡಿಯಲ್ಲದ ಕನ್ನಡವನ್ನು ಕಲಿತು, ಆ ಭಾಷೆಯಲ್ಲಿ ಆಧ್ಯಾತ್ಮಿಕ ಸಾಹಿತ್ಯರಚನೆಯ ಸಾಮರ್ಥ್ಯ ಹೊಂದಿದುದಿನ್ನೊಂದು; ಈ ಎರಡರಿಂದಲೂ, ಅವರು ಪಡೆದ ಶಿವಯೋಗಸಿದ್ಧಿಯಿಂದಲೂ ಅವರ ಚಾರಿತ್ರ್ಯಕ ಘನತೆ ಪರಿಪೂರ್ಣಗೊಂಡಿದೆ.

ಅವರ ಚರಿತ್ರೆಯ ಮೂಲ ವಿಷಯಗಳು ಅವರ ವಚನಗಳಲ್ಲಿಯೇ ಸಿಕ್ಕುತ್ತಿವೆ. ಇನ್ನುಳಿದ ಅವರಣಕ್ಕಾಗಿ ಸಂಭವನೀಯ ಊಹೆ-ಕಲ್ಪನೆಗಳಿಂದ ಸನ್ನಿವೇಶಗಳನ್ನು ಚಿತ್ರಿಸಲು ಸಹಾಯವಾದುದು ಈ ಕೆಳಗಿನವುಗಳಿಂದ :

1. ಆ ಕಾಲದ ಭಾರತದ ರಾಜಕೀಯ ಸಾಮಾಜಿಕ ಇತಿಹಾಸ.

2. ದಿ. ಶ್ರೀ. ಚನ್ನಪ್ಪ ಉತ್ತಂಗಿ ಹಾಗು ಪ್ರೊ. ಎಸ್. ಎಸ್. ಭೂಸನೂರಮಠ ಅವರು ಸಂಪಾದಿಸಿದ "ಮೋಳಿಗೆಯ ಮಾರಯ್ಯನವರ ವಚನಗಳು" ಮತ್ತು ಆ ಗ್ರಂಥದ ವಿಸ್ತೃತ ಪ್ರಸ್ತಾವನೆ.

3. ಬೆಂಗಳೂರು 'ಬಸವಸಮಿತಿ'ಯ 'ಬಸವೇಶ್ವರರ ಸಮಕಾಲೀನರು'

4. ಕಾವ್ಯ ಶ್ರೀ. ಸಿದ್ಧಯ್ಯಾ ಪುರಾಣಿಕ ಅವರ 'ಶರಣಚರಿತಾಮೃತ.'

ಪೂರ್ವದ ಕವಿಕೃತಿಗಳಾದ ಸುಮಾರು ೧೫–೧೬ ಪುರಾಣಕಾವ್ಯಗಳಲ್ಲಿ ಮಾರಯ್ಯನವರ ಚರಿತ್ರೆ ಪೂರ್ಣವಾಗಿ ಇಲ್ಲವೆ ಭಾಗಶಃ ಬಂದಿದೆ. ಅವರನ್ನೇ ಕುರಿತು ರಚಿತವಾದ 'ಮೋಳಿಗೆಯ್ಯ ಪುರಾಣ'ವೂ ಒಂದಿದೆ. ಆದರೆ ಇವೆಲ್ಲ ಅಸಹಜವಾದ ಪವಾಡಗಳಿಂದ, ಕೆಲವು ಪರಸ್ಪರ ಹೊಂದಿಕೆಯಿಲ್ಲದ ಘಟನೆಗಳಿಂದ ಕೂಡಿವೆ. ಇವುಗಳನ್ನು ಪರಿಶೀಲಿಸಿ ಸಮನ್ವಯುಗೊಳ್ಳುವ, ಹಾಗು ಆದಷ್ಟು ಒಮ್ಮತಕ್ಕೆ ಬರುವ, ಅಸ್ವಾಭಾವಿಕವಲ್ಲದ ಚಾರಿತ್ರಿಕಾಂಶಗಳನ್ನು ವಿದ್ವಾಂಸರು ನಿರ್ಣಯಿಸಿದ್ದಾರೆ. ಅಂತಹ ಇತ್ತೀಚಿನ ತಜ್ಞರಲ್ಲಿ ಮೇಲ್ಕಾಣಿಸಿದ ಗ್ರಂಥಕರ್ತರಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುವೆ.

ಈ ಪುಸ್ತಕದ ಪ್ರಕಟನೆಗೆ ಕೃಪೆಮಾಡಿ ಉದಾರಾಶ್ರಯ ನೀಡಿದವರು ಪರಮ ಪೂಜ್ಯ ಲಿಂಗೈಕ್ಯ ಬಂಥನಾಳ ಸಂಗನಬಸವೇಶ್ವರ ಶಿವಯೋಗಿಗಳು. ಅವರು ತಮ್ಮ ಲೋಕಕಲ್ಯಾಣಕಾರ್ಯಗಳ ಅಂಗವಾಗಿ ಕನ್ನಡ ವಾಙ್ಮಯದ–ವಿಶೇಷ ವಾಗಿ ಶರಣಸಾಹಿತ್ಯದ–ಪ್ರಕಟನೆಗಾಗಿ ಒಂದು ನಿಧಿಯನ್ನಿರಿಸಿ, ಅದರ ಬಡ್ಡಿಯಲ್ಲಿ ವರ್ಷಕ್ಕೆ ಒಂದಾದರೂ ಗ್ರಂಥವನ್ನು ಪ್ರಕಟಿಸಲು ಏರ್ಪಡಿಸಿದ್ದಾರೆ. ಈ ಮಾಲಿಕೆಯಲ್ಲಿ ಕರುಣೆಯಿಂದ ನನ್ನ ಈ ಕೃತಿಯು ಪ್ರಕಟನೆಗೆ ಸಹಾಯವಿತ್ತರು. ಆದರೆ ಇದರ ಅಚ್ಚು ನಡೆದಿರುವಾಗಲೇ ನನ್ನ ಮತ್ತು ಈ ನಾಡಿನ ದುರ್ದೈವ ದಿಂದ ಪೂಜ್ಯಪಾದರು ಲಿಂಗೈಕ್ಯರಾದರು. ಮುದ್ರಿತ ಪುಸ್ತಕದ ಪ್ರತಿಯನ್ನು ಪ್ರತ್ಯಕ್ಷವಾಗಿ ಅವರ ಪಾದದಲ್ಲಿಟ್ಟು ನನ್ನ ಕೃತಜ್ಞತೆ ಸಲ್ಲಿಸುವ ಭಾಗ್ಯ ನನಗಿಲ್ಲವಾಯಿತು. ದೇಶಕಾಲಭೇದವಿಲ್ಲದ ಅಖಂಡವಾದ ನಿತ್ಯವಾದ ಅವರ ಆತ್ಮಚೈತನ್ಯಕ್ಕೆ ಭಕ್ತಿಗೌರವಗಳನ್ನು ಅರ್ಪಿಸಿ ಅವರ ಸ್ಮೃತಿಗೆ ಈ ಅಲ್ಪ ಕೃತಿಯನ್ನು ಮುಡಿಪಾಗಿಸುವೆ.

ಆತ್ಮೀಯರಾದ ಶ್ರೀ ಶಾಂತರಸರ ರಾಯಚೂರ ಅವರು ಈ ಪುಸ್ತಕದ ಕರಡುಪ್ರತಿಯನ್ನು ನೋಡಿ ಎಂದಿನಂತೆ ಸಲಹೆಸೂಚನೆಗಳನ್ನು ನೀಡಿ ಹೆಸರು ಸೂಚಿಸಿದರು. ಕನ್ನಡ ಸಾಹಿತ್ಯಪರಿಷತ್ತಿನ ಜಿಲ್ಲಾ ಸಮಿತಿಯ ಅಧ್ಯಕ್ಷ ರಾದ ಪ್ರಾಧ್ಯಾಪಕ ಶ್ರೀ ಸಂಗಮನಾಥ ಹಂಡಿ M. A. ಅವರು ನಮ್ಮ ಅವಸರಕ್ಕೆ ಒದಗುವಂತೆ ಅಂದವಾದ ಮುನ್ನುಡಿ ಬರೆದುಕೊಟ್ಟು ಅಲಂಕ ರಿಸಿದ್ದಾರೆ. ಇದಲ್ಲದೆ ಸಹಾಯಕ ಗ್ರಂಥಾವಲೋಕನದಲ್ಲಿ ನನ್ನ ಒಂದು ತಾತ್ಕಾಲಿಕ ತಪ್ಪುಗ್ರಹಿಕೆಯಿಂದ 'ಅನುಭವಾಮೃತ ಬರೆದ ಮಹಾಲಿಂಗರಂಗನು ರಾಷ್ಟ್ರಕೂಟರ ಕಾಲದಲ್ಲಿ ಕಾಶ್ಮೀರದಿಂದ ಕರ್ನಾಟಕಕ್ಕೆ ಬಂದು ನೆಲಿಸಿದ್ದ ಸಾವಾಸೀ ಬ್ರಾಹ್ಮಣರ ವಂಶದವನು' ಎಂಬದರ ಬದಲಾಗಿ 'ಮಹಾಲಿಂ ರಂಗನೇ ರಾಷ್ಟ್ರಕೂಟರ ಕಾಲದಲ್ಲಿ ಕಾಶ್ಮಿರದಿಂದ ಕರ್ನಾಟಕಕ್ಕೆ ಬಂದ ಸಾವಾಸೀ ಬ್ರಾಹ್ಮಣನು' ಎಂದು ಭಾವಿಸಿ ಬರೆಯಲಾಯಿತು. (ಪುಟ, ೬ ಮತ್ತು ೧೧೨), ಈ ಇಬ್ಬರು ಸಾಹಿತ್ಯತಜ್ಞರೂ ಇದನ್ನು ನನ್ನ ಗಮನಕ್ಕೆ ತಂದರು. ಈ ಎಲ್ಲ ಉಪಕಾರಗಳಿಗಾಗಿ ಈ ಮಹನೀಯರಿಬ್ಬರಿಗೂ ನಾನು ತುಂಬ ಕೃತಜ್ಞನಾಗಿರುವೆ.

ಶಿವಯೋಗೀಶ್ವರ ಮುದ್ರಣಾಲಯದ ಮ್ಯಾನೇಜರರಾದ ಶ್ರೀ. ಮ. ಚ. ಕೋರಿ ಅವರು ಬಂಥನಾಳ ಶ್ರೀಗಳ ಆದೇಶದಂತೆ, ತಮಗಿರುವ ಅನುಕೂಲತೆಯಲ್ಲಿಯೇ ಆದಷ್ಟು ಅಂದವಾಗಿ ಅಚ್ಚುಮಾಡಿಕೊಟ್ಟರು. ಅವರಿಗೆ ನನ್ನ ಕೃತಜ್ಞತೆಗಳು.

ವಿಜಾಪುರ
೧೫-೮-೨೨

ಸುಜನವಿಧೇಯ
**ಲಕ್ಕಪ್ಪ ಅ. ಶಿರಹಟ್ಟಿ**

---

## ತಿದ್ದುಪಡಿ

೬ ನೆಯ ಪುಟದ ಕೆಳಭಾಗದಲ್ಲಿರುವ

ರಾಷ್ಟ್ರಕೂಟರಾಜರ ಆಶ್ರಯದಲ್ಲಿ ಅನುಭವಾಮೃತ ರಚಿಸಿದ ಮಹಾಲಿಂಗ ರಂಗನು ಕಾಶ್ಮೀರದವನಂತೆ

ಈ ವಾಕ್ಯದ ಬದಲಾಗಿ

ರಾಷ್ಟ್ರಕೂಟರಾಜರ ಆಶ್ರಯದಲ್ಲಿ, ಕರ್ನಾಟಕಕ್ಕೆ ಬಂದುನಿಂತ ಸಾವಾಸೀ ಬ್ರಾಹ್ಮಣ ಪಂಡಿತರು ಕಾಶ್ಮೀರದವರಂತೆ

ಈ ವಾಕ್ಯವನ್ನು ಅಲ್ಲಿ ಸೇರಿಸಿ ಓದಿಕೊಳ್ಳಬೇಕೆಂದು ವಿನಂತಿ.

ಇದಲ್ಲದೆ ಕೆಳಗಿನಂತೆ ದಯವಿಟ್ಟು ತಿದ್ದಿಕೊಳ್ಳುವದು.

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೪೩ | ೨೧ | ಅರರಿಬ್ಬರು | ಅವರಿಬ್ಬರು |
| ,, | ,, | ಅಮನೆ | ಅರಮನೆ |
| ,, | ೨೬ | ಮುಂತ್ರಿ | ಮಂತ್ರಿ |
| ೬೩ | ೨ | ಮೂಡಿಸ | ಮೂಡಿಸ |
| ,, | ೧೪ | ಮುತ್ತೋಂದ | ಮುತ್ತೊಂದ |
| ೮[illegible] | ಕೊನೆ | ಸುಭವಿಸಿ | ಅನುಭವಿಸಿ |
| ೮೩ | ಕೊನೆ | ನಿಮ್ಮದೆಯು | ನಿಮ್ಮೆದೆಯು |
| ೮೯ | ೨೦ | ಪೈಶಾಚಿಕ | ಪೈಶಾಚಿಕ |
| ೯೦ | ೨೨ | ನಿಷ್ಪಮಣಿ | ನಿಷ್ಕ್ರಮಣ |
| ೧೧೨ | ೪ | ಮಹಾಲಿಂಗರಂಗ | ಸಾವಾಸೀ ಬ್ರಾಹ್ಮಣರು |

# ಪರಿವಿಡಿ

# ೧. ಕಾಶ್ಮೀರ–ಕರ್ನಾಟಕ

ಶಿವಶಕ್ತಿಯ ಕುಶಲಕಲೆ ಸೃಷ್ಟಿಸೌಂದರ್ಯ! ಆ ಸೌಂದರ್ಯದ ಸರ್ವ ರೂಪಗಳನ್ನು ಸಂಗಳಿಸಿಕೊಂಡಿದೆ ಕಾಶ್ಮೀರ! ಹಿಮಾಚ್ಛಾದಿತ ಶಿಖರಗಳಿಂದ ಆಳವಾದ ಕೊಳ್ಳಗಳ ವರೆಗಿನ ವಿವಿಧ ಪ್ರಕಾರದ ಭೂಸ್ವರೂಪಗಳು, ಅವವುಗಳಿಗೆ ತಕ್ಕ ವನರಾಜಿಗಳು, ಹೂ ಹಣ್ಣುಗಳ ಗಿಡಗಳು, ಬೆಳೆಗಳು ಅಲ್ಲಿ ಶೋಭಿಸುತ್ತಿವೆ. ಹಾಗೆಯೇ ಸಣ್ಣ ದೊಡ್ಡ ಮೃಗಗಳು ಬಣ್ಣಬಣ್ಣದ ಪಕ್ಷಿಗಳು ಅಗಣಿತವಾಗಿ ವಿಹರಿಸುತ್ತಿವೆ. ಈ ಭವ್ಯ–ಮನೋಹರ ಸೊಗಸಿನ ಪರಿಸರದಲ್ಲಿ–ಹಿಮಾಲಯದ ತೋಳಮಡಿಲಲ್ಲಿ ಸುಖದ ಶಯ್ಯೆಯಲ್ಲಿದ್ದಂತಿದ್ದ ಸಪಾದಲಕ್ಷ (ಸವಾಲಕ್ಷ) ಪ್ರದೇಶದಲ್ಲಿ ಇನ್ನೂ ಹೆಚ್ಚಿನ ಚೆಲುವು ಚೆಲ್ಲುವರಿದಿದೆ. ಅಲ್ಲಿ ಹಿಮಾದ್ರಿಯ ಶಾಖೆಗಳು ಕೈ ಬೆರಳುಗಳಂತೆ ಸಮಾಂತರ ಸಾಲಾಗಿ ಬಂದಿವೆ. ಹಿಮನದಿಗಳು ಹೊಳೆಯುತ್ತಿವೆ. ಹೊಳೆಗಳು ಬೆಟ್ಟ ಇಳಿದು ಬರುತ್ತಿವೆ. ಬೆಟ್ಟಗಳ ಅಡಿಗಳಲ್ಲಿ ಕೊಳಗಳು ಕಂಗೊಳಿಸುತ್ತಿವೆ. ಹಸಿರಿನ ನಡುವೆ ಹಳ್ಳಿಯ ದೇವಮಂದಿರಗಳ ಗೋಪುರಗಳು ಎದ್ದು ಕಾಣುತ್ತಿವೆ. ಇವೆಲ್ಲವುಗಳಿಗೆ ಮನಸೋತ ಮಾರ್ಗಗಳು, ನೇರವಾಗಿ ಹೋಗದೆ ಸುತ್ತಿ ಸುಳಿದು ಏರಿ ಇಳಿದು ಹೋದಂತಿವೆ.

ಪಥಿಕರು ಹಸಿರು ಸಾಗರದ ಹಿರಿಕಿರಿಯ ತೆರೆಗಳಲ್ಲಿ ತೇಲಿ ಮುಳುಗಿ ಕಾಣುತ್ತ ಅಡಗುತ್ತ ಬರುತ್ತಾರೆ, ಹೋಗುತ್ತಾರೆ. ಹೋಗುವವರು ಬರುವಂತೆ, ಬರುವವರು ಹೋಗುವಂತೆ ಕಾಣುತ್ತಾರೆ. ಸೌಂದರ್ಯದ ಮಡಿಲಲ್ಲಿ ಇದೊಂದು ಚಿನ್ನಾಟ.

ಸೂರಜನು ಗ್ರಾಮದ ಹಿಂದಿನ ಏರಿಗಿರುವ ದೇವಾಲಯದಲ್ಲಿ ಅಮರೇಶ್ವರ ಲಿಂಗಕ್ಕೆ ವಂದನೆ ಸಲ್ಲಿಸಿ ಗುಡಿಯ ಕಟ್ಟೆಯ ಮೇಲೆ ಬಂದು ನಿಂತನು. ಕೊಳ್ಳದಾಚೆಯ ಗುಡ್ಡದೋರೆಯಲ್ಲಿ ಕುಸು ತೆರೆದು ಕಾಣುವ ದಾರಿಯನ್ನೇ ದಿಟ್ಟಿಸಿ ನೋಡುತ್ತಿದ್ದನು. ನಿನ್ನಿನ ದಿನವೆಲ್ಲ ಹೀಗೆ ಹಲವು ಸಲ ಬಂದು

ನಿಂತು ನೋಡಿ ಅಲ್ಲಿ ಯಾರು ಬರುವದನ್ನೂ ಕಾಣದೆ ಹಿಂದಿರುಗಿದ್ದನು. ಕೊಳ್ಳದಲ್ಲಿ ಎತ್ತರವಾಗಿ ಬೆಳೆದು ನಿಂತ ತಾಳ, ಖರ್ಜೂರ, ಸೂಚೀಪರ್ಣ ವೃಕ್ಷಗಳ ಮೇಲೆ ಹಾಯ್ದು ಆ ದಾರಿ ಕಾಣುತ್ತಿತ್ತು. ಇಂದು ಸ್ವಲ್ಪ ಹೊತ್ತು ನೋಡುತ್ತಿರುವಾಗ ಅಲ್ಲಿ ಮುಂದೆರಡು ಯಾಕ ಪಶುಗಳನ್ನು ಅಟ್ಟಿಕೊಂಡು ಕುದುರೆಯ ಮೇಲೆ ತಾನು ಕುಳಿತು ಬರುತ್ತಿದ್ದ ವ್ಯಕ್ತಿಯೊಬ್ಬನು ಕಾಣಿಸಿದನು. 'ಸರಿ ಬಂದಂತಾಯಿತು ಧೇನುಪಾಲ! ಆದರೆ ಇನ್ನೂ ಹತ್ತು ಪಶುಗಳೆಲ್ಲಿ? ಅವನ ಜತೆಯ ಆಳೂ ಕಾಣುವದಿಲ್ಲ,' ಎಂದು ಆಲೋಚಿಸುವಷ್ಟರಲ್ಲಿ ಆ ಪಶುಗಳೊಡನೆ ಆ ವ್ಯಕ್ತಿ ಕಾಣದಂತಾದನು. ಹಿಂದೆ ಮತ್ತಾರೂ ಇಲ್ಲ 'ಮತ್ತೇನು ಸಂಭವಿಸಿತೋ ಅಮರನಾಥನೆ ಅರಿವ! ಏನೇ ಆಗಲಿ, ಧೇನುಪಾಲನ ಹೊರತು ಈಗ ಬರುವವರು ಮತ್ತಾರು? ಅವನೇ ಬಂದನು' ಎಂದು ಸೂರಜ್ ಕಳವಳದಲ್ಲಿಯೇ ಸ್ವಲ್ಪ ಸಮಾಧಾನ ತಾಳುತ್ತ ಕೆಳಗಿಳಿದು ಬಂದು ತನ್ನ ಮನೆಯಲ್ಲಿ ತಿಳಿಸಿ ವಖಾರದ ಬಾಗಿಲಲ್ಲಿ ಬಂದು ಕುಳಿತನು.

ಒಂದು ತಾಸು ಕಳೆದ ಮೇಲೆ ಹತ್ತಿರದ ಕೊಳ್ಳದಲ್ಲಿ ಕೇಳಿಸಿತು: 'ಅಲ್ಲೇನಿದೆ,? ಇಲ್ಲಿ ಇದೆ ನಿಮ್ಮ ಮನೆಯು ಹಾದಿ; ನಿಮ್ಮೂರಿಗೆ ಬಂದಿದ್ದೇವೆ. ಹತ್ತು ಮೇಲೆ ಸಾಕಾಗಿಲ್ಲವೆ ಕೈಕೋಲ ಹೊಯ್ದು?........' ಸೂರಜ್ ಅಚ್ಚರಿಪಟ್ಟನು. ತನ್ನಷ್ಟಕ್ಕೆ ತಾನೆ 'ಇಷ್ಟು ಕನ್ನಡ ಮಾತಾಡುವನೇ ನಮ್ಮ ಧೇನು?' ಎನ್ನುತ್ತ ಮುಂದೆ ಬಂದನು. ಅಷ್ಟರಲ್ಲಿ ಪ್ರಸ್ತರ ಭೂಮಿಯ ಮೇಲೆ ಏರಿಬಂದ ವ್ಯಕ್ತಿ 'ನಮಸ್ಕಾರ ಸೂರಜ್‌ದೇವ' ಎನುತ್ತ ಯಾಕದಿಂದಿಳಿದನು

"ನಮಸ್ಕಾರ ಬರಬೇಕು, ಬರ್ರಿ. ನಾ ತಿಳಿದಿದ್ದೆ: 'ಧೇನುಪಾಲನೇ ಬಂದ' ಎಂದು; ಅವನ ಅಂಗಿನೇ ಧರಿಸಿದ್ದೀರಿ ನೀವು!"

"ಧರಿಸಬೇಕಾಯಿತಲ್ಲ! ನನ್ನನ್ನು ಗುರ್ತಿಸಿದಿರಾ? ನಿಮ್ಮ ಗ್ರಾಮಕ್ಕೆ ನಾ ಬಂದು ನಾಲ್ಕಾರು ವರ್ಷವಾದರೂ ಆಗಿರಬೇಕು."

"ನಿಮ್ಮನ್ನ ಮರೀತೇವೇನ್ರಿ? ಮಾಣಿಕಸೆಟ್ಟಿ ನೀವು! ಧೇನು ಭೆಟ್ಟಿ ಎಲ್ಲಿ ಆಯಿತು? ಅವನೇಕೆ ಬರಲಿಲ್ಲ?"

"ನಿಮ್ಮ ಧೇನುಪಾಲ ಬಿಟ್ಟೆಯಲ್ಲಿ ಸಿಕ್ಕು ಬಿದ್ದ. ಪುರುಷಪುರ (ಪೇಶಾವರ)ಕ್ಕೆ ಹೋಗಿ ಬರಲು ಹತ್ತು ಹದಿನೈದು ದಿನಗಳಾದರೂ ಬೇಕು."

“ಅದು ಹೇಗೆ ಸೆಟ್ಟರೇ ?”

“ಹೇಳುತ್ತೇನೆ ತಡೆಯಿರಿ ಆ ಕಥೆಯನ್ನು! ಮೊದಲು ಭಾರವಾದ ಈ ಬಟ್ಟೆಗಳನ್ನು ಬಿಚ್ಚುತ್ತೇನೆ. ನಿಮ್ಮ ಚಳಿರಾಯನ ಹಿಂಸೆ, ನಸುಕಿನಲ್ಲಿ ಸಾಂದ್ರಶಿಲೆಯಿಂದ ಎದ್ದು ಹೊರಡುವಾಗ ಚಳಿಕೊರೀತಾ ಇತ್ತು. ಧೇನುಪಾಲನ ಉದ್ದಂಗಿ ಟೊಪ್ಪರ ಎಲ್ಲಾನೂ ನನ್ನ ಬಟ್ಟೆಗಳ ಮೇಲೆ ಹಾಕಿಕೊಂಡು ಬಿಟ್ಟೆ.”

“ಆದಾಯ್ತು, ಧೇನು ಎಲ್ಲಿ ಸಿಕ್ಕನು ಮ್ಲೇಂಛರ ಕೈಗೆ?”

“ಅದನ್ನೇ ಕೇಳಿರೀಗ” ನಾನು ವಲ್ಲಭಿಗೆ ಬಂದ ಮರುದಿನವೇ ನಿಮ್ಮ ಧೇನು, ಇಪ್ಪತ್ತು ಒಂಟೆಗಳ ಮೇಲಿನ ಉತ್ತತ್ತಿ ಖರ್ಜೂರ, ಮಸಾಲೆ ಮೂಟೆಗಳನ್ನು ಇಳಿಸಿ ಒಪ್ಪಿಸಿದನು. ಅದೇ ದಿನ ಕಾಳಿಂಜರದ ಕಡೆಯಿಂದ ನಮ್ಮಣ್ಣ ಭವ್ರಪ್ಪ—ಅವನೂ ಇತ್ತ ಬರುತ್ತಿರುತ್ತಾನೆ. ನೀವೂ ಕಂಡಿರಬಹುದು.

“ಇಲ್ಲ, ಮುಂದೆ ಹೇಳಿರಿ.”

“ಆತನು ಒಂದು ಬಳ್ಳ ವಜ್ರದ ಹರಳು ತಕ್ಕೊಂಡು ಬಂದನು. ಅವುಗಳಲ್ಲಿ ಅರ್ಧ ತಕ್ಕೊಂಡು ಉತ್ತರಕ್ಕೆ ಹೋಗಲು ನನಗೆ ಹೇಳಿದನು. ಉಳಿದ ವಜ್ರಗಳೊಡನೆ ನನ್ನ ಹೇರೆತ್ತುಗಳನ್ನು ಸಾಗಿಸಿಕೊಂಡು ಕಲ್ಯಾಣಕ್ಕೆ ತಾನು ಹೋಗುವೆನೆಂದನು. ಹಾಗೆ ಅವನನ್ನು ಅತ್ತ ಕಳಿಸಿ, ಎಳ್ಳು, ಮತ್ತು ಹಚ್ಚಡದ ಗಂಟುಗಳನ್ನು ಒಂಟೆಗಳ ಮೇಲೆ ಹೇರಿಕೊಂಡು ಹೊರಟ ಧೇನುಪಾಲನೊಡನೆ ನಾನು ಇತ್ತ ಹೊರಟೆನು. ರಜಪುತ ಸ್ಥಾನವನ್ನು ದಾಟುವದು ಸುರಕ್ಷಿತವಾಗಿತ್ತು. ಆದರೆ ಪುರುಷಪುರದ ಸುಲ್ತಾನನ ಅಧಿಕಾರಿಗಳು ಲಾಹೋರದಲ್ಲಿ ಸಂಗ್ರಹಿಸಿದ ಗೋದಿಯ ಮೂಟೆಗಳನ್ನು ತಮ್ಮ ರಾಜಧಾನಿಗೆ ಒಯ್ಯಲು ಸಾರಿಗೆಯ ಪಶುಗಳನ್ನು ಬಿಟ್ಟೀ ಹಿಡಿದು ಸಂಗ್ರಹಿಸುತ್ತಿದ್ದಾರೆಂದು ದಾರಿಯಲ್ಲಿಯೇ ನಮಗೆ ಗೊತ್ತಾಯಿತು.”

“ಲಾಹೋರದಲ್ಲಿದ್ದ ನಮ್ಮ ಪಶುಗಳು ಸಿಕ್ಕುಬಿದ್ದಂತೆಯೇ ಆಯಿತಲ್ಲ”

“ಹೌದು, ಅದೇ ಚಿಂತೆ ಧೇನುಪಾಲನನ್ನು ಕಾಡಿತು. ಕೊನೆಗೆ ನಾವು ದಾರಿಯನ್ನು ಬದಲಿಸಿ ಪುಂಜಗಿರಿಗೆ ಹೋಗಿ ನಮ್ಮ ಬದುಕು ಇಳಿಸಿಟ್ಟು ಕಾರವಾನರಿಗೆ ಅಪ್ಪಣೆ ಕೊಟ್ಟೆವು. ನಾವಿಬ್ಬರೂ ಲಾಹೋರಿಗೆ ಹೋದೆವು. ಅಷ್ಟರಲ್ಲಿ ನಿಮ್ಮ ಹದಿನೈದು ಯಾಕಗಳನ್ನು ಹಿಡಿದು ಹೇರಿ ಹೊರಡಿಸಿಬಿಟ್ಟಿದ್ದರು ಖಾನ ಜನರು! ಅವುಗಳನ್ನು ಮರಳಿ ಪಡೆದುಕೊಂಡು ಬರಲು ಕೂಡಲೆ ಧೇನುಪಾಲ ಪುರುಷಪುರಕ್ಕೆ ಹೊರಡಬೇಕಾಯಿತು.”

"ಇಲ್ಲದಿದ್ದರೆ ಆ ಯಾತಕಗಳೂ ನಮ್ಮ ಕೈ ಬಿಡುತ್ತಿದ್ದವು. ನೀವು ಒಳ್ಳೇ ಹೊತ್ತಿಗೆ ಅಲ್ಲಿಗೆ ಬಂದಿರಿ. ಲಾಹೋರದ ರಾಜನಿಗೆ ದೂರು ಕೊಡ ಬಹುದಾಗಿತ್ತೇನೋ ?"

"ಲಾಹೋರದ ಅರಸು" ಗಿಝುನಿಯ ಸುಲ್ತಾನರ ಮಾಂಡಲಿಕ! ಇದ ನ್ನೆಲ್ಲ ತಡೆಯುವ ಶಕ್ತಿ ಆ ರಾಜನಿಗಿಲ್ಲ."

"ಭಾರತಕ್ಕೆ ಬಂದ ಶಾಪವಿದು! ಅಮರೇಶ್ವರನೇ ಪರಿಹರಿಸಬೇಕು"

"ಹೌದು ಅವನೇ ಪರಿಹರಿಸಬೇಕು! ನೀವು ಸುಮ್ಮನೇ ಕುಳಿತಿರಿ"

"ನೂರಾರು ವರ್ಷಗಳಿಂದ ನೆತ್ತರು ಸುರಿಸುತ್ತಿದ್ದಾರೆ ನಮ್ಮವರು! ಏನೂ ಆಗಿಲ್ಲ."

"ಈ ಹಾವಳಿ ಪೂರ್ವಕ್ಕೆ ದಿಲ್ಲಿ ಕನ್ಯಾಕುಬ್ಜಗಳವರೆಗೆ ಆಗ್ನೇಯಕ್ಕೆ ಕಾಲಿಂಜರದ ವರೆಗೆ ದಕ್ಷಿಣಕ್ಕೆ ಸೌರಾಷ್ಟ್ರ ಗುಜರಾಥಗಳವರೆಗೆ ಹಬ್ಬಿದೆ. ಕಾಲಿಂಜರದ ದೊರೆಗಳು ಅಲ್ಲಿಂದ ಕಾಲುಕಿತ್ತು, ಕರ್ನಾಟಕದಲ್ಲಿ ಚಾಲು ಕ್ಯರ ಸೇವೆ ಕೈಕೊಂಡು ಮಂಗಳವೇಡೆಯ ಮಂಡಲೇಶ್ವರರಾದರು."

"ನಿಮ್ಮಲ್ಲಿ ರಾಷ್ಟ್ರಕೂಟರು ಚಾಲುಕ್ಯರು ಪ್ರಬಲರಾದರು. ಚಾಲುಕ್ಯರ ವಿಕ್ರಮಾದಿತ್ಯನು ಬಂಗಾಲ ಕಾಮರೂಪಗಳನ್ನೂ ಗೆದ್ದನಂತೆ! ಯವನರ ಸಮಾಚಾರಕ್ಕೇಕೆ ಬರಲಿಲ್ಲ ?"

"ಅದು ಹೇಗೆ ಸಾಧ್ಯ ? ಈ ಕಡೆಗೆ ನೂರಾರು ರಾಜಮಹಾರಾಜ ರುಗಳು ಇದ್ದಾರಲ್ಲ! ಅವರವರ ನಡುವಿನ ಸಮಸ್ಯೆಗಳನ್ನು ಬಿಡಿಸುವದೇ ನಮ್ಮ ದೊರೆಗಳಿಗೆ ನೀಗದಷ್ಟಾದೀತು! ಅವರು ತಮ್ಮ ಸಾಮ್ರಾಜ್ಯದಲ್ಲಿ ಆಡಳಿತದ ಬಲವನ್ನು ಭದ್ರವಾಗಿರಿಸಿಕೊಂಡು ಧರ್ಮ, ಕಲೆ ಸಾಹಿತ್ಯ ಸಂಸ್ಕೃತಿಗಳನ್ನು ರಕ್ಷಿಸಿ ಬೆಳೆಸಿಕೊಂಡು ಬರುತ್ತಿದ್ದಾರೆ. ನಿಮ್ಮ ಕಾಶ್ಮೀರದಿಂದ ಕೂಡ ಪಂಡಿ ತರು, ಶಾಸ್ತ್ರಿಗಳು, ಕವಿಗಳು ತಮ್ಮ ಬುದ್ಧಿಜ್ಞಾನಗಳನ್ನು ಪ್ರಚುರ ಪಡಿಸಲು ಕರ್ನಾಟಕಕ್ಕೆ ಬಂದು ರಾಜಾಶ್ರಯ ಪಡೆಯುತ್ತಿದ್ದಾರೆ. ಹಾಗೆಯೇ ಯೋಗಸಾ ಧಕರು, ಜಂಗಮರು ಶಾಂತಿಯ ನೆಲೆಯನ್ನು ಅರಸುತ್ತ ಕನ್ನಡ ನಾಡಿನಲ್ಲಿ ಬಂದು ಇಚ್ಛಿತವನ್ನು ಈಡೇರಿಸಿಕೊಳ್ಳುತ್ತಿದ್ದಾರೆ. ರಾಷ್ಟ್ರಕೂಟ ರಾಜರ ಆಶ್ರ ಯದಲ್ಲಿ ಅನುಭವಾಮೃತ ರಚಿಸಿದ ಮಹಾಲಿಂಗರಂಗನು ಕಾಶ್ಮೀರದವನಂತೆ! ಅಂದನಿಂದ ಇಂದಿಗೆ ಎರಡುನೂರು ವರ್ಷ, ಹಾಗೆಯೇ ಅಲ್ಲಿಗೆ ಬರುತ್ತಲೇ ಇದ್ದಾರೆ."

“ ದಾಳಿಕಾರರ ಉಪದ್ರವದಿಂದ ಅವರು ಹಾಗೆ ಹೋಗುತ್ತಿರಬಹುದು. ಹಿಮಾಲಯದ ಅಡಿಯಲ್ಲಿ ನಗನದಿಗಳ ಪ್ರದೇಶವಾದ ನಮ್ಮ ಸಪಾದಲಕ್ಷ ರಾಜ್ಯವು ದಾಳಿಗಾರರಿಗೆ ದುರ್ಗಮವಾಗಿ, ಸುರಕ್ಷಿತವಾಗಿ ಉಳಿದಿದೆ. ನಮ್ಮ ರಾಜ ಮಹಾದೇವಪ್ರಭು ಧರ್ಮದರ್ಶಿ ಯಾಗಿದ್ದಾನೆ. ಇಂದಿನ ವರೆಗೆ ಯಾರಿಗೂ ಯಾವ ಭಯವೂ ಇಲ್ಲ. ಆದರೆ ಶೈವತತ್ವಗಳನ್ನೂ ಆಮಸಾಧನ ಮಹಿಮೆ ಯನ್ನೂ ಬೋಧಿಸುತ್ತಿರುವ ನಮ್ಮ ಜಂಗಮರು ಇತ್ತೀಚೆಗೆ ಕಾಣದಾಗ ಹತ್ತಿದ್ದಾರೆ. ಅರಮನೆಯ ಆರಾಧನೆಗೆ ಜಂಗಮರ ಕೊರತೆಯಂತೆ ! ಆದರಿಂದ ರಾಣಿ ಗಂಗಾದೇವಿ ಆಗಾಗ ಆಹಾರ ಸೇವಿಸದೆ ಕಾಯಬೇಕಾಗುತ್ತದಂತೆ! ರಾಜದೂತರು ಅಲ್ಲಲ್ಲಿ ಬಂದು ಶೋಧಿಸಿದರು. ಗುರುಕುಲಗಳು ಬರಿದಾಗಿವೆ. ಆಶ್ರಮಗಳು ನಿರ್ಜನವಾಗಿವೆ. ಅವರು ಎಲ್ಲಿ ಹೋಗಿರಬಹುದು ? ”

“ ಅವರೂ ಕರ್ನಾಟಕಕ್ಕೆ ಹೋಗಿದ್ದಾರೆ ಸೂರಜ್‌ದೇವ! ಆದರೆ ಅವರು ಯಾವದೊಂದು ಭಯದಿಂದ ನಿಮ್ಮ ರಾಜ್ಯ ಬಿಟ್ಟವರಲ್ಲ ! ಕಲ್ಯಾಣದಲ್ಲಿ ಬಸವ ಣ್ಣನವರ ಹಿರಿಯತನದಲ್ಲಿ ಶೈವಧರ್ಮದ ಸುಧಾರಣೆಗಾಗಿ ಒಂದು ನೂತನ ವಿಚಾರಕ್ರಾಂತಿ ನಡೆಯುತ್ತಿದೆ. ಅದನ್ನು ಕೇಳಿ ಮೆಚ್ಚಿದ ಭಾರತದ ನಾನಾ ಭಾಗಗಳಿಂದ ಆಧ್ಯಾತ್ಮಿಕ ಸಾಧಕರು ಅದರಲ್ಲಿ ಭಾಗವಹಿಸಲು ಅಲ್ಲಿಗೆ ಧಾವಿಸು ತ್ತಿದ್ದಾರೆ. ಹಾಗೆಯೇ ನಿಮ್ಮಲ್ಲಿಯ ಶೈವ ಜಂಗಮರೂ ಅಲ್ಲಿಗೆ ಹೋಗುತ್ತಿದ್ದಾರೆ. ಕೆಲ ಕಾಲದ ಹಿಂದೆ ನಮ್ಮಲ್ಲಿಯ ಬಳ್ಳೀಗಾಂವಿಯ ಮಹಾ ಮೇಧಾವಿ ಅನುಭಾ ವಿಗಳೊಬ್ಬರು ಕಾಶ್ಮೀರದಲ್ಲಿ ಅನುಷ್ಠಾನದಲ್ಲಿದ್ದರು. ಅವರೂ ಅಂತಹ ಶ್ರೇಷ್ಠ ನೂತನ ವಿಚಾರದ ಯೋಗಿಗಳೇ ! ಅವರು ಇಲ್ಲಿ ಗಿರಿಗಂಹರಗಳಲ್ಲಿರುವ ಮುನಿ ಗಳಿಗೆ ಮಾರ್ಗದರ್ಶನಮಾಡಿ ನೂತನ ಚೇತನ ನೀಡಿದ್ದಾರಂತೆ ! ಅವರಿಂದ ನಿಮ್ಮ ರಾಜ್ಯದ ಜಂಗಮರು ಕೂಡ ಕರ್ತೃತ್ವ ಶಕ್ತಿಯನ್ನು ಭಕ್ತಿಯಾಗಿಸಿ ಜ್ಞಾನದಲ್ಲಿ ಬೆರಿಸಿ, ಶಾಂತಿ ಸೌಖ್ಯ ಅನುಭವಿಸಿ ಸಹಜವಾಗಿ ಮೋಕ್ಷ ಪಡೆ ಯುವ ಮಾರ್ಗವನ್ನು ಕೇಳಿಕೊಂಡಿರಬೇಕು. ಆತ್ಮತೃಪ್ತಿಯಿಂದ ಅನುಭಾವದ ಅತುರತೆಯಿಂದ ಅನುಭಾವ ಸದ್ಗೋಷ್ಠಿಯಲ್ಲಿ ಭಾಗವಹಿಸಲು ಕಲ್ಯಾಣಕ್ಕೆ ಹೋಗುತ್ತಿದ್ದಾರೆ ”

“ ಹೌದೇನು ? ನಿಜ ಇರಬೇಕು. ಅಲ್ಲರೀ ಮಾಣಿಕ ಸೆಟ್ಟರೆ, ನೀವು ನೋಡಿದರೆ ವ್ಯಾಪಾರಿಗಳು. ನಿಮಗಿದೆಲ್ಲಾ ವಿಚಾರ ಹೇಗೆ ಗೊತ್ತು ? ”

“ಇದೇನಾಶ್ಚರ್ಯ ಸೂರಜದೇವ? ಈಗ ನೋಡ್ರಿ, ಕಾಶ್ಮೀರದಿಂದ ಕರ್ನಾಟಕಕ್ಕೆ ಕಲ್ಯಾಣದಿಂದ ಕಾಶ್ಮೀರಕ್ಕೆ ತಿಂಗಳಾನುತಿಂಗಳು ನಾವು ಮಾರ್ಗಕ್ರಮಣ ಮಾಡಬೇಕಷ್ಟೇ! ಆಗ ನಮ್ಮೊಡನೆ ಕೂಡಿ ಬರುವವರು ವ್ಯಾಪಾರಿಗಳಷ್ಟೇ ಇರುವದಿಲ್ಲ. ಯೋಗಿಗಳಿರುತ್ತಾರೆ, ಜ್ಞಾನಿಗಳಿರುತ್ತಾರೆ, ಪಂಡಿತರಿರುತ್ತಾರೆ. ಬೇರೆ ರಾಜ್ಯದವರು ನಡುನಡುವೆ ಬಂದು ಕೂಡುತ್ತಾರೆ; ಅಗಲಿಹೋಗುತ್ತಾರೆ. ಗುಂಪುಗೂಡಿ ಸಾಗಿದಾಗ, ತಂಗಿದಾಗ ಎಲ್ಲರ ಬಾಯಿ ಗಳಿಗೆ ಕೆಲಸವೇನು? ಧರ್ಮ, ತತ್ವ, ಸಮಾಜ, ಪ್ರಭುತ್ವ, ರಾಜಕೀಯ ಇವುಗಳ ಮಾತೇಮಾತು! ಚರ್ಚೆಯೋ ಚರ್ಚೆ. ಪಂಡಿತರಿದ್ದಾಗ ಪ್ರವಚನ ಗಳೂ ನಡೆಯುತ್ತಿವೆ. ಎಲ್ಲ ವಿಷಯಗಳ ಪ್ರಸಾರ ಆಗುವದು ಹೀಗೆಯೇ ಅಲ್ಲವೇನು? ನೋಡಿರೀಗ ನಮ್ಮಲ್ಲಿಯವರು ಬಂದು ಬಂದು ನಿಮಗೆ ಕನ್ನಡ ವನ್ನು ಕಲಿಸಿಬಿಟ್ಟರು. ವ್ಯಾಪಾರಕ್ಕಾಗಿ ನೀವೂ ಕಲಿಯಬೇಕಾಯಿತು. ನಮ್ಮ ವೀರ ಬಣಂಜು ಸಂಘಗಳಲ್ಲಿ ಬಹು ಜನರಿಗೆ ಇಲ್ಲಿಯ ಭಾಷೆ ಬರುತ್ತಿದೆ. ಅವರು ಮರಳಿ ಬರುವಾಗ ಸಂಗಡ ಕಾಶ್ಮೀರದವರು ಬರುತ್ತಿರುತ್ತಾರೆ. ಉಳಿದ ನಾಲ್ಕೆಂಟು ಭಾಷೆಗಳೂ ಬರುತ್ತಿವೆ ನಮ್ಮವರಿಗೆ.”

“ಹೌದಪ್ಪಾ ಹೌದು! ಏಳಿರಿ, ಊಟವಾಗಲಿ. ಧೇನುಪಾಲ ಮತ್ತೇ ನಾದರೂ ಹೇಳಿದನೇ?”

‘ಆಗ ಸಾಕಷ್ಟು ವೇಳೆ ಇರಲಿಲ್ಲ ಅವಸರದಲ್ಲಿ ತನ್ನ ಬಟ್ಟೆಬರೆ ಗಳನ್ನು ಒಯ್ಯಲಾಗಲಿಲ್ಲ ಅವನಿಗೆ! ಶಕ್ತಿಸಾಲದ ಈ ಮೂರು ಯಕ್ಕಗಳನ್ನು ಖಾನಜನರು ಹಿಂದೆ ಬಿಟ್ಟಿದ್ದರು ಇವುಗಳನ್ನು ಸಾಗಿಸಿಕೊಂಡು ಛತ್ರದಲ್ಲಿದ್ದ ತನ್ನ ಬಟ್ಟೆ ತಟ್ಟೆಗಳನ್ನು ತಕ್ಕೊಂಡು ನಿಮ್ಮ ಕಡೆಗೆ ಹೋಗಲು ತಿಳಿಸಿದ್ದಷ್ಟೇ! ಮತ್ತೊಂದು ಮಾತು ಸ್ವಲ್ಪ ಹೇಳಿದ. ಪುರುಷಪುರದಲ್ಲಿ ಬರ್ಬರದಿಂದ ಬಂದಿದ್ದ ಉತ್ತತ್ತಿ ಹಿಂಗ-ಲವಣ-ಮಸಾಲೆಗಳನ್ನು ಹದಿನೈದು ಪಶುಗಳ ಮೇಲೆ ಹೇರಿ ಕೊಂಡು ಬರುವೆನೆಂದು.”

“ಏನ ಮಾಡುವದು ಆದನ್ನ? ಈಗಲೇ ನನ್ನ ವಖಾರ ತುಂಬಿದೆ.”

“ನೀವೇನೂ ಚಿಂತೆ ಮಾಡಬೇಡಿರಿ. ನಿಮ್ಮ ಎಲ್ಲ ಸರಕನ್ನೂ ನಾನೇ ಕೊಳ್ಳುತ್ತೇನೆ ಇನ್ನೂ ಹೆಚ್ಚಿಗೆ ಯಕ್ಕಗಳನ್ನು ನೆರೆಯಲ್ಲಿ ಎರವಲುಪಡೆ ಯುತ್ತೇನೆ. ಗುರ್ಜರದಲ್ಲಿ ನಮ್ಮ ಬಣಂಜು ಸಂಘದ ಹೇರೆತ್ತುಗಳು ಸಾಕಷ್ಟು ಬಂದಿರುತ್ತವೆ. ಎಷ್ಟು ಬದುಕಾದರೂ ಕಲ್ಯಾಣದಲ್ಲಿ ಬೇಕಾಗುತ್ತದೆ.”

“ಅದು ನಿಮ್ಮ ಸಾಮ್ರಾಜ್ಯದ ರಾಜಧಾನಿ. ಅದರಂತಹ ಮಹಾ ನಗರ ಭೂಮಂಡಲದಲ್ಲಿ ಬೇರೊಂದಿಲ್ಲವೆಂದು ಮರಹಠರು ಗುರ್ಜರರು ಹೇಳುವರಷ್ಟೇ ಅಲ್ಲದೆ ಚಾಲುಕ್ಯ ಸಾಮ್ರಾಜ್ಯದ ಹೊರಗಿನ ಲಾಳ, ಕಾಂಭೋಜ, ನೇಪಾಳಿಗಳು ಕೂಡ ಹೇಳುತ್ತಿದ್ದಾರೆ.”

“ಹೌದು ಮತ್ತೆ! ‘ನಾಸೀದಾಸ್ತಿ ಕ್ಷಿತಿತಲೇ ಕಲ್ಯಾಣ ಕಲ್ಪಂ ಪುರಂ” ನಾವೆಲ್ಲ ಒಯ್ಯುತ್ತೇವೆ. ನನ್ನ ಹತ್ತಿರದ ಈ ಅರೆಬಳ್ಳು ವಜ್ರದ ಹರಳುಗಳನ್ನು ನೀವೇ ಒಪ್ಪಿಸಿಕೊಳ್ಳುತ್ತೀರಾ? ಅಥವಾ ಇಬ್ಬರೂ ಕೂಡಿ ಮತ್ತೆಲ್ಲಿಗಾದರೂ ಹೋಗುವದೇ?”

“ಅಷ್ಟೆಲ್ಲಾ ನನ್ನಿಂದಾಗದು ಸೆಟ್ಟರೆ. ಹೋಗುವದಾದರೆ ಮಾಂಡವ್ಯ ಪುರಕ್ಕೆ ಹೋಗಬೇಕು!”

“ಅಲ್ಲಿ ನಿಮ್ಮ ಪ್ರಭುಗಳಿಗೂ ತೋರಿಸಬಹುದಷ್ಟೇ?”

“ಅಡ್ಡಿ ಏನು? ನಿಮ್ಮ ಕನ್ನಡ ಅವರಿಗೆ ತಿಳಿಯುತ್ತದೆ. ಅವರ ಕಾಶ್ಮೀರಿ ನಿಮಗೆ ತಿಳಿಯುತ್ತದೆ. ಆದರೆ ಅವರೀಗ ಚಿಂತೆಯಲ್ಲಿದ್ದಂತಿದೆ. ಅವರು ನಿಮ್ಮಿಂದ ಹಲವು ಸಂಗತಿ ಕೇಳಿ ತಿಳಿಯ ಬಯಸಬಹುದು.”

“ಆಗಬಹುದು.”

“ಆಗಲಿ ಬರ್ರಿ, ಮನೆಯಲ್ಲಿ ಮೊದಲೇ ಹೇಳಿದ್ದೇನೆ. ಹಸಿದಿಲ್ಲವೇ?

“ಹಸಿಯದೇನು? ಈ ಗಂಟನ್ನು ಸಂದುಕದಲ್ಲಿಡಿರಿ, ಸ್ನಾನ ಮಾಡುತ್ತೇನೆ ಲಿಂಗಾರ್ಚನೆಯಾಗಬೇಕು.”

“ದೇವಾಲಯ ಹತ್ತಿರವೇ ಇದ್ದಾಗ ನಮ್ಮ ಅಮರನಾಥ ಲಿಂಗಕೆರೆ ಕೈಮುಗಿದರೆ ಆಗದೇ?”

“ಆಗದು ಸೂರಜದೇವ; ಅದಿಷ್ಟೇ ನಮಗೂ ನಿಮಗೂ ಇರುವ ಅಂತರ!”

# ೨. ಅಂಧಶ್ರದ್ಧೆಯ ನಿರಸನ

" ಪ್ರಭುಗಳು ಇತ್ತ ಬರುತ್ತಲಿದ್ದಾರೆ ದೇವಿಯವರೇ. ! ಬಾಗಿಲಿಗೇ ಬಂದರು. "

ವಿಶಾಲವಾದ ಪೂಜಾಮಂದಿರದಲ್ಲಿ ಪೀಠಕ್ಕೆ ತಲೆ ಆನಿಸಿ, ನೆಲದಮೇಲಿನ ಹುಲ್ಲಹಾಸಿನಲ್ಲಿ ಅರ್ಧ ಒರಗಿದ ರಾಣಿ ಗಂಗಾದೇವಿ, ಪೂಜಾಮಂದಿರದ ಸೇವಿಕೆ ಹೇಳಿದ ಈ ಮಾತು ಕೇಳಿ ಎಡಗೈಯೂರಿ ಎದ್ದು ಕುಳಿತು, ಮೈಮೇಲಿನ ಮಡಿ ಬಟ್ಟೆಯ ಸೆರಗು ಸರಿಮಾಡಿಕೊಂಡಳು.

" ಏನು ಇಂದು ಕೂಡ ಉಪವಾಸವೇ ಆಯಿತಷ್ಟೇ ? "

" ಜಂಗಮ ಪೂಜೆ ಎರಡು ದಿನಕ್ಕೂ ಪೂರ್ತಿಯಾಗಲಿಲ್ಲ; ವ್ರತ ಪೂರೈಸದೆ ಪ್ರಸಾದವೆಲ್ಲಿ ? "

ಹೀಗೆ ಹೇಳುವದರೊಡನೆ ಗಂಗಾದೇವಿ ಬಳಕುತ್ತ ಎದ್ದು ನಿಲ್ಲುವದರಲ್ಲಿದ್ದಳು. ಮಹಾದೇವ ರಾಜನು ಏಳದಿರಲು ಸೂಚಿಸಿ ಮತ್ತೆ ಕೇಳಿದನು:

" ಈಗೇನು ಮಾಡುವದು ? "

" ಈಗೇನಿಲ್ಲ. ನಾಳೆ ಹತ್ತು ಜನ ಮಾಹೇಶ್ವರರಾದರೂ ದೊರೆತರೆ ಒಟ್ಟಾಗಿ ಪೂಜಾ ಸಂಖ್ಯೆ ಪೂರೈಸಿ ಪ್ರಸಾದ ಸೇವನೆ ಸಾಧ್ಯವಾದೀತು ? "

" ಮುಂದೆ ? "

" ಮುಂದೆಯೂ ಹೀಗೆ ಎರಡು ಮೂರು ದಿನಕ್ಕೊಮ್ಮೆಯಾದರೂ ಪೂಜಾ ಸಂಖ್ಯೆ ಪೂರ್ತಿಗೊಂಡಾಗ ಪ್ರಸಾದಕೊಳ್ಳುತ್ತ ಇರಬಹುದು. ಆದರೆ ಬರುವ ವೈಶಾಖದಲ್ಲಿ ಹಿಮಕರಗಿ ಅಮೃತನಾಥನ ಕ್ಷೇತ್ರಕ್ಕೆ ದಾರಿಯಾಗುವದು. ಆ ಮಾರ್ಗೋತ್ಸವಕ್ಕೆ ಆರು ಸಾವಿರ ಜಂಗಮರು ಹೇಗೆ ದೊರೆಯುವರೆಂಬುದೇ ದೊಡ್ಡ ಚಿಂತೆ ! "

" ಹೇಗೆ ದೊರೆಯುವರು ? ನಿತ್ಯದ ಐವತ್ತು ಜನ ಮೂರ್ತಿಗಳೇ ಈಗ ಸಿಕ್ಕದಂತಾಗಿದ್ದಾರೆ. ಅತ್ತಿತ್ತ ಹುಡುಕ ಹೋದ ಸೇವಕರು ಮರಳಿ ಬಂದರು

ಎಲ್ಲಿಯೂ. ಜಂಗಮರಿಲ್ಲ. ಕಲ್ಯಾಣದ ಕಡೆಗೇ ಹೋಗಿದ್ದಾರಂತೆ! ‘ಕಲ್ಯಾಣ ದಲ್ಲಿ ಅಂತಹದೇನಿದೆ? ಬಸವಣ್ಣನೆಂಬವನು ಯಾರು? ಮಹಾ ಮಹಾ ಜನರನ್ನೆಲ್ಲ ಮರುಳು ಮಾಡುವ ಮಂತ್ರ ಆವನಲ್ಲೇನಿದೆ? ಎಂಬದನ್ನು ರಹಸ್ಯವಾಗಿ ಅರಿದು ಬರಲೆಂದು ನಾವು ಕಳಿಸಿದ ಸೇನಾನಿ ನಿಜಲಿಂಗನು ಅಲ್ಲಿಯೇ ನಿಂತುಬಿಟ್ಟನು. ಬರ್ಬರ § ದಿಂದ ಬಂದ ಶಂಕರದೇವನೆಂಬ ಯೋಗ ಸಾಧಕನು ಕಲ್ಯಾಣದ ಕತೆಯನ್ನು ಕೇಳಿಯೇ ಮರುಳನಾಗಿ ಅತ್ತ ಹೋದನಂತೆ!”

“ಬುದ್ಧಿಬಲವುಳ್ಳ ಮಹಾಜನರು ಅತ್ತ ಧಾವಿಸುತ್ತಿದ್ದಾರೆ. ವಿಚಾರ ಮಾಡಿಯೇ ಹಾಗೆ ಹೋಗುತ್ತಿರಬಹುದಲ್ಲ! ಅಂಥದೇನಿದ್ದೀತು ಮಹತ್ವದ ಕಾರಣ!”

“ಹಾಂ....ಅದೇಯೋಚನೆ ನನಗೂ! ಅಮರೇಶ್ವರಾ........” ನಿಟ್ಟು ಸಿರು ಬಿಡುತ್ತ ರಾಜ, ರಾಣಿಯ ಮುಂದೆ ನೆಲದ ಮೇಲೆಯೇಕುಳಿತು ಮತ್ತೆ ನುಡಿದ :

“ಇದರಲ್ಲಿ ಏನೋ ಇದೆ, ಇದ್ದರೆ ಮಹತ್ವದ್ದೇ ಇದೆ. ಅಲಕ್ಷಿಸುವಂತ ಹದಲ್ಲ. ದೇವೀ ಈ ವ್ರತ ಈ ಉತ್ಸವ ಈ ಆಡಂಬರಗಳೇ ಬೇರೆ! ನಿಜ ವಾಗಿ ನಾವು ಮಾಡಬೇಕಾದುದೇ ಬೇರೆ! ನನ್ನ ಒಳದನಿ ಗುಣುಗುತ್ತಿದೆ, ಇದೆಲ್ಲಾ ನಿರರ್ಥಕ ಪರಿಶ್ರಮವೆಂದು! ದೊರೆಗಳು ನಾವೆಂಬ ಹೆಮ್ಮೆ ನಮಗೆ! ಹಿಮಾಚ್ಛಾದಿತ ಅಮರೇಶ್ವರ ಹಿಮಕರಗಿ ಕಂಡಾಗ ಸಾವಿರಾರು ಜಂಗಮ ರೊಡನೆ ಹೋಗಿ ಗಣಪರ್ವ ಮಾಡುತ್ತೇವೆಂಬ ದೊಡ್ಡತನ ಬೇಕು ನಮಗೆ! ದುಡಿಯಲಿಲ್ಲ, ದುಃಖಪಡಲಿಲ್ಲ. ದುಡಿವವರು ನೀಡುವ ಧನದಿಂದ ಈ ಆಡಂಬರ! ನಾವು ಮಾಡಿದೆವೆಂಬ ಅಭಿಮಾನ–ಕೀರ್ತಿಗಳಿಸುವದಕ್ಕೆ ಈ ಉತ್ಸವ. ಇದನ್ನು ಕೊಂಡು ಅಮರೇಶ್ವರ ನಮ್ಮ ರಾಜಭೋಗಗಳನ್ನು ಕಾಪಾಡಬೇಕು. ಅವ ನೇನು ಅದರ ಗುತ್ತಿಗೆ ಹೊತ್ತವನೇ? ಅದರಿಂದ ನಮಗೆ ಚಿಂತೆ ತಪ್ಪಿದೆಯೇ? ಆನಂದವಿದೆಯೇ? ............ ತಪ್ಪಿದೆ, ನಾವು ಹಿಡಿದ ದಾರಿ ತಪ್ಪಿದೆ.”

“ಈ ದಿನವೆಲ್ಲ ನೀವು ಇದೇ ಯೋಚನೆಯಲ್ಲಿದ್ದಂತಿದೆ. ಮೊಗ ಬಾಡಿದೆ.”

“ಹೌದು ಗಂಗಾ, ನನಗಿಂದು ಸಮಾಧಾನವಿಲ್ಲ. ನಿನ್ನೆಗೂ ಇಂದಿಗೂ

§ ಬರ್ಬರ ಈಗಿನ ಅಫಘಾಣಿಸ್ಥಾನ’

ನನ್ನ ಮನಃಸ್ಥಿತಿಯಲ್ಲಿ ಬಹಳ ಬದಲಾವಣೆಯಾಗಿದೆ. ನನ್ನ ಸೊಕ್ಕು, ನನ್ನ ಅಭಿಮಾನ ಕತ್ತರಿಸಿ ಹೋಗಹತ್ತಿದೆ."

"ನನಗೆ ಕಳವಳ–ಕಾತರವಾಗುತ್ತಿದೆ ಸ್ವಾಮೀ! ಅಂಥದೇನು ನಡೆಯಿತು? ಯಾವ ಘಟನೆಯಿಂದ ಈ ಪರಿವರ್ತನೆ?"

"ಘಟನೆ? ಯಾವ ಘಟನೆ.? ನಡೆದುದೇ ಘಟನೆ! ಇಂದಾದುದು ಒಳಬಗೆಯ ಮಾರ್ಪಾಡು! ದೇವೀ ಬಿಚ್ಚಿ ಹೇಳಲಿಯಾ?"

"ಹೇಳಿ ಸ್ವಾಮೀ!"

"ಕೆಲದಿನಗಳಿಂದ ಅರಮನೆಯಲ್ಲಿಯ ನಮ್ಮ ಜಂಗಮಾರಾಧನೆ ಅಪಹಾಸ್ಯಕ್ಕೀಡಾಗುತ್ತಲಿದೆ. ನೀನು ಊಟವಿಲ್ಲದೆ ಕೊರಗುತ್ತಲಿರುವೆ. ಜಂಗಮರು ಹೋದುದಕ್ಕೆ ಈ ಅನವಸ್ಥೆ! ಈ ಉಮ್ಮಳ ಇಮ್ಮಡಿಸಿ ನಿನ್ನೆ ನನಗೆ ನಿದ್ರೆಯೇ ಬರಲಿಲ್ಲ. ಈ ಬಗೆಗಿನ ಕ್ರೋಧ ಕರಾಳರೂಪ ತಾಳಿತು. ನನ್ನಲ್ಲಿ ಕಂಠಮಾಟ ಹೊಡೆದು ಕೊಬ್ಬಿದ ಮಾಹೇಶ್ವರರೆಂಬವರು ನನ್ನನ್ನು ಕಡೆಗಣಿಸಿದರಲ್ಲಾ ಎನಿಸಿತು. ಅಹಂಕಾರ ತಲೆಯೆತ್ತಿತು. ಮನಸ್ಸು ತಾಮಸರಂಗಕ್ಕಿಳಿಯಿತು. ವಿಚಾರ ಅವಿಚಾರದ ದಾರಿಹಿಡಿಯಿತು. 'ಬಸವಣ್ಣ ವಿನಯಶೀಲನೆಂದು, ಸತ್ಯಾಚಾರಿ ಎಂದು ಹೇಳುತ್ತಾರೆ. ಇದು ಸುಳ್ಳು. ಆಶೆ–ಆಮಿಷಗಳಿಂದ ವಶಪಡಿಸಿಕೊಳ್ಳುವ ಮೋಸಗಾರನಾಗಿರಬೇಕು' ಎನಿಸಿತು. ಕ್ರೋಧವು ದ್ವೇಷದ ಬಾಗಿಲ ತೆರೆಯಿತು. 'ಗೂಢವೇನಿದೆ ನೋಡಿಕೊಂಡು ಬಾ' ಎಂದು ಕಳಿಸಿದ ಸೇನಾನಿಗೆ 'ಸಾಧಿಸಿದರೆ ಬಸವಣ್ಣನನ್ನು ಕೊಂದು ಬಾ' ಎಂದು ಹೇಳಬೇಕಾಗಿತ್ತು ಎನಿಸಿತು........"

"ಶಿವಶಿವ, ಅಮರೇಶಾ, ಎಂಥ ವಿಚಾರ! ಬಸವಣ್ಣನ ಭಕ್ತಿ, ಬಸವಣ್ಣನ ಕೀರ್ತಿಗಳನ್ನು ಎಷ್ಟು ಆಸಕ್ತಿಯಿಂದ ಕೇಳುತ್ತಿದ್ದಿರಲ್ಲ!"

"ಹೌದು, ಅದೆಲ್ಲ ವಿಷವಾಯಿತು. ಆಗಿನಮಟ್ಟಿಗೆ ಹಾಗೆನಿಸಿತು. ನೋಡ ಹೋದ ನಿಜಲಿಂಗನು ನನ್ನ ಆಜ್ಞೆ ಮೀರಿ ಅಲ್ಲಿಯೇ ನಿಂತವನು, ನಾ 'ಕೊಂದು ಬಾ' ಎಂದರೆ ಕೊಲ್ಲುತ್ತಾನೆಯೇ ಎಂಬದರ ಅರಿವುಕೂಡ ಆಗ ಆಗಲಿಲ್ಲ. ಕಲ್ಯಾಣದಿಂದ–ಕರ್ನಾಟಕದ ಭಾಗಗಳಿಂದ ಬರು ಹೋಗುವ ಯೋಗಿಗಳ–ಶರಣರ–ಜಂಗಮ ಮೂರ್ತಿಗಳ ಬಾಯಿಂದ ಬರುವ ಶಬ್ದಚಿತ್ರದಲ್ಲಿ, ಅವರ ಹೃದಯದಲ್ಲಿ ಮೂಡಿನಿಂತಂತೆ–ಕಾಣುವ, ಬಸವಣ್ಣನ ಮನೋ

ಹೆರಮೂರ್ತಿ, ನಿರ್ಮಲ ಪ್ರೇಮ ಭಕ್ತಿ ವಿನಯಗಳು ಚಿಮ್ಮಿ ಚಮಕಿಸು ತ್ತಿರುವ ಮುಖಭಾವ, ಆಚಾರದಲ್ಲಿಯ ಮರ್ಮ, ಕಾಯಕದ ವಿಚಾರ ಇವೆಲ್ಲ ಸ್ಮರಣೆಗೆ ಬಂದು, ಏನು ವಿಚಾರಿಸುತ್ತಿದ್ದೆ ? ಎಂಥ ಮೂರ್ಖಮತಿಯಾದೆ ? ಎಂದು ಕೊಂಡೆ........"

"ಉಳಿದೆ ಪತಿದೇವಾ, ಈ ಅಡಿಗಳಲ್ಲಿ ನಂಬಿಗೆಯಿಟ್ಟ ನನ್ನ ಜೀವನ ನಿರರ್ಥಕವಲ್ಲ ಎನ್ನುತ್ತಿರುವೆ. ಆ ಮೇಲೆ ? ,,

ಕಂಬನಿ ಮಿಡಿದು ಕೇಳಿದಳು ರಾಣಿ ಗಂಗಾದೇವಿ ! ಮಹಾದೇವ ರಾಜನ ಕಣ್ಣೂ ತೇವಾದವು, ಕ್ಷಣಹೊತ್ತು ಸ್ತಬ್ಧವಾಗಿ ಕುಳಿತು ಸಾವಕಾಶ ವಾಗಿ ನುಡಿಯತೊಡಗಿದನು !

"ವಿವೇಕದ ಸೆಳೆತಕ್ಕೆ ಸಿಕ್ಕ ಮನಸ್ಸು ಮಿದುವಾಗಿತ್ತು. ಹೀಗೆ ಕಂಬನಿ ಉದುರಿದವು. ಬಸವಾ ಎಂದೆ. ಆದರೆ ಈಗಿನ ಸಮಸ್ಯೆಗೆ ಪರಿಹಾರವೇನೂ ಕಾಣಲಿಲ್ಲ. ಅದು ಮತ್ತೆ ನಿಂತೇ ಬಿಟ್ಟಿತು. ಇಂಥದರಲ್ಲಿಯೇ ಸ್ವಲ್ಪ ನಿದ್ರೆ ಬಂತು. ಶಾಂತನಿದ್ರೆಯೇನಲ್ಲ. ಹಳವಂಡದ ಜೊಂಪು! ಜಾಗ್ರತಜೀವನದ ರಾಹುಗನ್ನಡಿ ಕನಸು' ಎಂದು ಬಲ್ಲವರು ಹೇಳುತ್ತಾರೆ. ಅದ್ಭುತಗೊಳಿಸುವದು ಅದರ ಸ್ವಭಾವ. ಕೆಲಮೊಂದು ಗಳಿಗೆ ತಾನು ನೆನೆದ ವಿಕೃತವಾದ ನೆನಹು ಗಳನ್ನು ಮನಸ್ಸು ಕಠೋರವಾಗಿ ಕಾರ್ಯಾಚರಣೆಯಲ್ಲಿ ತಂದಿತು ಕನಸಿನಲ್ಲಿ ! ಅಲ್ಲಿ ಅದಕ್ಕೆ ವಿವೇಕದ ತಡೆಯಿಲ್ಲ ; ಅನ್ಯರ ಆತಂಕವಿಲ್ಲ ; ಇಂದ್ರಿಯಗಳ ಸಹಾಯವೂ ಬೇಡ...."ರಾಜ ಮತ್ತೆ ಕಣ್ಣೊರಿಸಿಕೊಂಡ. ಅದನ್ನು ಕಂಡ ರಾಣಿ, ಉಕ್ಕಿ ಬರುವ ತನ್ನ ಕಂಬನಿಗಳನ್ನು ತೊಡೆದು ಕೈ ಮುಗಿದು ಎಂದಳು.

" ಹೇಳಿ ಸ್ವಾಮೀ ಕನಸಿನ ಕಥೆಗೆ ವ್ಯಥೆಯೇಕೆ ? ,,

"ಕನಸಿನ ಕತೆಗೆ ವ್ಯಥೆಯಿಲ್ಲ ದೇವೀ ! ಆ ಕತೆಯು ಕಾರಣ ನನ್ನನ್ನು ಕಂಗೆಡಿಸಿತು. ಆ ಕನಸಿನ ಖಡ್ಗ ನಮ್ಮ ಸರ್ವ ಚಿಂತೆಗಳನ್ನು ಕತ್ತರಿಸು ವಂತಿದೆ ವ್ಯಥೆಯಿಲ್ಲ, ಇನ್ನು ಕೇಳು : ಗುಪ್ತವಾಗಿ ಮಹಮನೆಯನ್ನು ಪ್ರವೇಶಿಸಿ ಬಸವಣ್ಣನನ್ನು ಕೊಂದು ಬಾ ಎಂದು ನಿಜಲಿಂಗನನ್ನು ಕಳಿಸಿದೆ. ಆತನು ಲಿಂಗದಂತಹ ಕೃತ್ರಿಮ ಗಂಟನ್ನು ಕೊರಳಲ್ಲಿ ಕಟ್ಟಿಕೊಂಡು ಜಂಗಮರ ವೇಷ ಹಾಕಿಕೊಂಡು ತನ್ನ ವಾಚಾಳಿತೆಯಿಂದ ಬಸವಣ್ಣನ ಹತ್ತಿರಕ್ಕೇ ಹೋಗಿ ದ್ದನು. ನಾನೂ ಹೋಗಿದ್ದೆನು, ದೂರನಿಂತು ನೋಡುತ್ತಿದ್ದೆನು. ಬಸವಣ್ಣ

'ಶರಣು ಶರಣಾರ್ಥಿ' ಬನ್ನಿ ದೇವಾ ಎಂದು ನಿಜಲಿಂಗನ ಕಾಲಿಗೆರಗುತ್ತಿರುವಾಗ ನಿಜಲಿಂಗನು ಕಪನಿಯ ಮರೆಯಿಂದ ಕಠಾರಿಯನ್ನು ತೆಗೆದು ಅವನ ಬೆನ್ನಲ್ಲಿ ಇರಿಯಲು ಎತ್ತಿದನು. ಹತ್ತಿರಿದ್ದವರು ಹಾ ಹಾ ಎನ್ನುವಾಗ ಕೈಯ ಕಠಾರಿ ಕುಸುಮಮಾಲೆಯಾಗಿ ಬಸವೇಶನ ಕೊರಳಲ್ಲಿ ಬಿದ್ದಿತು. 'ಇದೇನು ಕಾರಣ ಕರುಣೆಯಯ್ಯಾ? ನನ್ನಯ್ಯ ನನ್ನ ಚಿಕ್ಕಯ್ಯ' ಎನ್ನುತ್ತ ಬಸವೇಶ ನಿಜಲಿಂಗನನ್ನು ಅಪ್ಪಿಕೊಂಡನು. ನಿಜಲಿಂಗನು ಅವನ ಪಾದಕ್ಕೆ ಎರಗಿ ಕ್ಷಮೆ ಕೇಳಿಕೊಳ್ಳುತ್ತಿದ್ದನು ನಾನೂ ಹೋಗಿ ನನ್ನ ಕಣ್ಣೀರುಗಳಿಂದ ಬಸವಣ್ಣನ ಪಾದ ತೊಳೆದೆನು. ಕಪೋಲದ ಕೆಳಗೆ ಬಿಸಿನೀರು ಬಂದಂತಾಗಿ ಎಚ್ಚರಾಯಿತು! ದಿಂಬು ತೊಯ್ದಿತ್ತು,,

"ಮಿಂಚಿದಷ್ಟು ಮಳೆಯಾಯಿತು. ಕಲ್ಮಷಕಳೆದು ಹೋಯಿತು."

"ಮೋಡವಿನ್ನೂ ಕರಗಬೇಕು. ಹೃದಯಾಂಬರ ನಿರ್ಮಲವಾಗಬೇಕು"

"ಹೌದು ಸ್ವಾಮಿ ಆಗಬೇಕು."

ರಾಜ ದಂಪತಿಗಳು ತನ್ನ ಕಡೆಗೆ ಮುಖವೆತ್ತಿ ನೋಡುವದಕ್ಕೆ ಕಾದು ನಿಂತಿದ್ದ ಅಂತರಂಗದ ದಾಸಿಯನ್ನು ಗಂಗಾದೇವಿ ಕಂಡರಿತು :

"ಏನು? ಬಾ ಮುಂದೆ. ಅಷ್ಟು ದೂರ ನಿಂತೆ?"

ಎಂದಳು ರಾಜನೂ ತಲೆಯೆತ್ತಿ ನೋಡಿದನು. ದಾಸಿ ಕೈ ಮುಗಿದುಹೇಳಿದಳು:

"ಯುವರಾಜರು ಬಾಗಿಲಲ್ಲಿ ಕಾದಿದ್ದಾರೆ."

"ಲಿಂಗಾರತಿ? ಒಳಗೆ ಬರಹೇಳು."

"ಅವರು ಓಲಗದ ಉಡುಪಿನಲ್ಲಿದ್ದಾರೆ"

"ಹಾಗೋ? ಬಂದೆ"

ಮಹಾದೇವರಸು ಎದ್ದು ಹೋದನು. ಗಂಗಾದೇವಿ ದಾಸಿಯಿಂದ ಒಂದು ಬಟ್ಟಲು ನೀರು ತರಿಸಿ ಕುಡಿದು ಹಲ್ಲಹಾಸಿನ ಮೇಲೆ ಮತ್ತೆ ಒರಗಿದಳು. ದಾಸಿಗೆ 'ಮಡಿ ಬಟ್ಟೆ ಬಿಟ್ಟು, ಊಟ ಮಾಡಹೋಗು' ಎಂದು ಹೇಳಿದಳು.

× × × × ×

ಆ ಬಾಗಿಲ ಹೊರಮಗ್ಗಲು ಕಾದುನಿಂತಿದ್ದ ರಾಜಪುತ್ರ, ಲಿಂಗಾರತಿಯು ಅಲ್ಲಿ ಬಂದ ತಂದೆಗೆ ವಂದಿಸಿ :

"ಓಲಗದ ಚಾವಡಿಯಲ್ಲಿ ಅಧಿಕಾರಿಗಳು ನಮ್ಮ ಬರವಿಗಾಗಿ ಕಾದು ಕುಳಿತಿದ್ದಾರೆ; ವೇಳೆ ಮಿಕ್ಕಿದೆ. ನೀವು ಪೂಜಾಮಂದಿರದಲ್ಲಿರುವದನ್ನು ಕೇಳಿ ನಾನೇ ನೋಡಬಂದೆನು."

" ನಿನ್ನ ತಾಯಿ ಇಂದು ಕೂಡ ಆಹಾರವಿಲ್ಲದೆ ಉಳಿಯಬೇಕಾಗಿದೆ. ಆ ಬಗೆಗೆ ಮಾತಾಡುತ್ತ ಕುಳಿತಿದ್ದೆ. ಚಾವಡಿಯಲ್ಲಿ ಕೆಲಸಗಳೇನು ? ನೀನು ನೋಡಿಕೊಳ್ಳಬಹುದಾಗಿತ್ತಲ್ಲ ! "

" ನಿತ್ಯದ ಕೆಲಸಗಳನ್ನು ವಿಚಾರಿಸಿ ಮುಗಿಸಿದ್ದೇನೆ. ಆದರೆ ನಮ್ಮ ರಾಜ್ಯದಲ್ಲಿಯ ಅಂಟು, ಅರಗು, ರಾಳ, ಜೇನುಗಳ ಗುತ್ತಿಗೆಯ ವ್ಯಾಪಾರದ ಅಪ್ಪಣೆ ಕೇಳಲು ಉಜ್ಜಯಿನಿಯ ವ್ಯಾಪಾರಿಗಳು ಬಂದಿದ್ದಾರೆ. "

" ಆ ವಿಷಯ ನಮ್ಮ ಪೂರ್ವಾಲೋಚನೆಯ ನಂತರ ನಿರ್ಧರಿಸಬೇಕಾದುದು. ಈ ಬೆಳೆ ಈ ಸಲ ಎಷ್ಟಾಗಬಹುದೆಂಬದನ್ನು ಅರಣ್ಯಾಧಿಕಾರಿಗಳಿಂದ ತಿಳಿದುಕೊಂಡು ಸುಂಕದ ನಿಗದಿ ಮಾಡಬೇಕಾಗುವದು. ಅವರಿಗೆ ನಾಳೆ ಅಪರಾಹ್ನ ಬರಹೇಳಬೇಕು. "

" ಆಗಲಿ, ಇಷ್ಟಕ್ಕೆ ಇಂದಿನ ಕಾರ್ಯ ಮುಗಿಸುತ್ತೇವೆ. "

" ಆಗಬಹುದು. ಮಗು, ಇನ್ನೊಂದು ! ಪೇಟೆಯಲ್ಲಿ ಕಲ್ಯಾಣದವರು ಕರ್ನಾಟಕದವರು–ಕೊನೆಗೆ ದಕ್ಷಿಣ ದೇಶದವರು ಯಾರಾದರೂ ಬಂದಿದ್ದರೆ ತಿಳಿದುಕೊಳ್ಳಬೇಕು. "

" ಚಾರರನ್ನು ಕಳಿಸಿ ತಿಳಿಯುತ್ತೇನೆ. " ಎನ್ನುತ್ತ ಲಿಂಗಾರತಿ ನಡೆದನು. ಅರಸು ಏಕಾಂತ ನಿವಾಸಕ್ಕೆ ತೆರಳಿದನು. ' ಶಾಂತಿ ವಿಚಾರಕ್ಕೂ ಸ್ವಾತಂತ್ರ್ಯವಿಲ್ಲ, ಅಧಿಕಾರದ ಹೆಮ್ಮೆಯಲ್ಲಿ ಸುಖವಿಲ್ಲ. ' ಎಂದು ಮೊರೆ ಇಡುತ್ತಿತ್ತು ಮನಸ್ಸು !

× × × ×

ಹುಲ್ಲ ಹಾಸಿನಲ್ಲಿ ಹೊರಳಿದ ರಾಣಿಯ ತಲೆಯಲ್ಲಿ ತಳಕುಮಳಕಿನ ವಿಚಾರಗಳು ತಲೆಯೆತ್ತಿದವು. ಅಮರೇಶ್ವರನ ಧ್ಯಾನ ಓಸರಿಸಿ ಹೋಗಿತ್ತು. ದಡಕಾಣದ ಕಡಲ ಡೋಣಿಯ ಅಂಬಿಗ ಚಡಪಡಿಸುತ್ತಿರುವಂತೆ ಮನಸ್ಸು ಕಾತರಗೊಂಡಿತ್ತು. ಪತಿಯ ವಿಚಾರಾಂತರದ ಮಾತುಗಳಿಂದ ಈ ಅವಸ್ಥೆ ಉಂಟಾಗಿತ್ತು. ಆವನು ಎತ್ತಿದ ಪ್ರಶ್ನೆಗಳೇ ಅವಳ ಮುಂದೆ ನಿಂತವು :

' ತಾನು ಏನು ಮಾಡುತ್ತಿರುವೆ? ಇದರ ಫಲವೇನು? ಇದ್ದರೆ ಅದು ಯಾರಿಗೆ? ' ಎಂದು ಆಕೆಯ ಒಳಬಗೆ ಕೇಳಹತ್ತಿತು. ಏನು ಉತ್ತರ? ಮಜ್ಜನದ ಫಲ ನೀರಿಗೆ, ತಂದೀವ ಸೇವಿಕೆಗೆ! ಫಲಪುಷ್ಪ

ಪತ್ರಗಳ ಫಲ ವನರಾಜಿಗೆ! ವೃಷ್ಟ್ಯನ್ನದ ಫಲ ಕ್ಷೇತ್ರಕ್ಕೆ ರೈತರಿಗೆ! ನಾನು ಮಾಡುವದೇನು? ಅಂತಹ ಪೂಜೆ ಪೂರೈಸದಿದ್ದರೆ ಉಪವಾಸ ಮಾತ್ರ ಮಾಡುವೆ. ಆದರಿಂದ ನಮಗೆ ಋಣಿಯಾದ ದೇವರು ನಮಗೆ ಭೋಗ ಸಂಪದಗಳನ್ನು ಕೊಡಬೇಕು! ಅದನ್ನು ಜನರಿಂದ ಪಡೆಯುವ ಅಧಿಕಾರ ಅಬಾಧಿತವಾಗಿರಬೇಕು! ಇದೊಂದು ವ್ಯವಹಾರ! ವ್ಯವಹಾರ ತಪ್ಪಿದರೆ ಪ್ರತಿಭಟಿಸುತ್ತೇವೆ. ಇದು ನಮ್ಮ ನಿಲವು. ಇದು ನಮ್ಮ ಭಕ್ತಿಯು ಅಣಕ ವಲ್ಲದೆ ಮತ್ತೇನು! ಪ್ರಭುಗಳು ಹೇಳಿದುದು ನಿಜವೇ ಇರಬೇಕು. ನಮ್ಮ ದಾರಿತಪ್ಪಿದೆ!'

ಅಂದಿನ ಅಪರಾಹ್ನ ಮುಂದಿನ ರಾತ್ರಿ ಹೇಗೋ ಕಳೆದವು

# ೩. ಬಸವಭಾವ ಪರವಶತೆ

ಮಾಂಡವ್ಯಪುರದ ಪೇಟೆಯ ಕಟ್ಟೆಯ ಮೇಲೆ ಮಾಣಿಕಸೆಟ್ಟಿಯ ವಜ್ರದ ಹರಳುಗಳ ವ್ಯಾಪಾರ ಭರದಿಂದ ನಡೆದಿತ್ತು. ಹತ್ತಿರ ಕುಳಿತಿದ್ದ ಸೂರಜದೇವ ಹಣ ಎಣಿಸಿ ತೆಗೆದುಕೊಳ್ಳುತ್ತಿದ್ದನು. ಅವನ ಮುಖ ಅರಳಿತ್ತು. ಸೆಟ್ಟಿಗೆ ಸಾಕಷ್ಟು ಹಣ ಸಂಪಾದನೆಯಾದರೆ ತನ್ನ ಸರಕನ್ನೆಲ್ಲ ಕೊಳ್ಳುವನೆಂಬದು ಅವನ ಹಿಗ್ಗಿನ ಕಾರಣ! ಕೊನೆಗೆ ತೀರ ಹೆಚ್ಚು ಬೆಲೆಯ ಕೆಲವೇ ಹರಳು ಅವರ ಹತ್ತಿರ ಉಳಿದಿದ್ದವು. ಅಷ್ಟರಲ್ಲಿ ಅರಸನಿಂದ ಕರೆ ಬಂದಿತು. ಸೆಟ್ಟಿಯ ಬಿಳಿಯ ಕೊಡೆ, ಕಾವಿಯ ಚಿಕ್ಕಧ್ವಜ ಇವುಗಳಿಂದ ಇವನು ಕರ್ನಾಟಕದ ಬಣಂಜು ಎಂದು ಗುರ್ತಿಸಿ ಚಾರರು ಅರಸನಿಗೆ ವರದಿ ಮಾಡಿದ್ದರು. ಅವರಿಬ್ಬರು ಅರಮನೆಗೆ ನಡೆದರು.

ಅವರು ದೊರೆಯನ್ನು ಕಂಡು ನೆಲಮುಟ್ಟಿ ನಮಿಸಿದಾಗ ದೊರೆ ಸೂರಜದೇವನನ್ನು ಗುರ್ತಿಸಿ ಕೇಳಿದನು :

“ ಇವರು ನಿನ್ನ ಪರಿಚಯದವರೇ ? ”

“ ಹೌದು ಪ್ರಭು! ಕಲ್ಯಾಣದ ವೀರಬಣಂಜು ಸಂಘದ ಪ್ರಮುಖರು, ದೊಡ್ಡ ವ್ಯಾಪಾರಿ, ಒಳ್ಳೆಯ ಸ್ನೇಹದ ಸ್ವಭಾವ! ಹೆಸರು ಮಾಣಿಕಸೆಟ್ಟಿ! ”

ಆಗ ಹರಳುಗಳ ಗಂಟು ಬಿಚ್ಚಿ ಹಸಿರು ರೇಶಿಮೆಯ ಬಟ್ಟೆಯ ಮೇಲೆ ಹರಡುತ್ತಿದ್ದ ಸೆಟ್ಟಿ ಎದ್ದು ನಿಂತು ದೊರೆಗೆ ಕೈ ಮುಗಿದು ಮತ್ತೆ ಕುಳಿತು ಆ ಕೆಲಸ ಮುಂದುವರಿಸಿದನು. ಅರಸು ಮೃದುಭಾವದಿಂದ ಅವನ ಶರಣು ಸ್ವೀಕರಿಸಿದರೂ ಆ ಸೆಟ್ಟಿಯ ಕರ್ತವ್ಯನಿಷ್ಠೆಯನ್ನು ಮೆಚ್ಚಿ ಪುರಸ್ಕರಿಸುವಷ್ಟು ವ್ಯವಧಾನದಲ್ಲಿರಲಿಲ್ಲ. ಮಹಾದೇವರಸು ಅರಸುತ್ತಿದ್ದುದು ಸಮಾಧಾನವನ್ನು! ಹರಳು ಮಣಿಗಳು ಬೇಕಾಗಿರಲಿಲ್ಲ; ಅವನ ಕುತೂಹಲ ಕೆರಳಿ ನಿಂತಿತ್ತು. ರಾಣಿ ಗಂಗಾದೇವಿಯೂ ಹಿಂದೆ ಸ್ವಲ್ಪ ದೂರದಲ್ಲಿ ಬಂದು ನಿಂತಿದ್ದಳು. ಆಕೆಗೂ ಆ ಹಸಿರು ರೇಶಿಮೆಯ ವಸ್ತ್ರದಲ್ಲಿ ವಿಚಿತ್ರವಾಗಿ ಚಿತ್ರಿಸಿದಂತೆ ವಿರಾಜಿಸುತ್ತಿ

ರುವ ವಜ್ರದ ಹರಳುಗಳ ಕಡೆಗೆ ಗಮನವಿಲ್ಲ. ಕಲ್ಯಾಣದ ಕಥನ ಕೇಳ ಬೇಕಾಗಿತ್ತು.

"ಸೆಟ್ಟರೆ ನಮ್ಮಲ್ಲಿಯ ಜಂಗಮರನ್ನು ನೀವು ಕರೆದುಕೊಂಡು ಹೋಗುತ್ತೀರಾ ?"

ಎಂದು ಮಹಾದೇವರಸು ಕೇಳಿದನು. ಧ್ವನಿಯಲ್ಲಿ ದರ್ಪವಿತ್ತು. ಅದು ರಕ್ತಗತ ರಾಜತ್ವದ ಗುಣ! ಸೆಟ್ಟಿ ಮತ್ತೆ ಎದ್ದು ನಿಂತು ವಿನಯದಿಂದ ಉತ್ತರಿಸಿದನು :

" ಇಲ್ಲ ಪ್ರಭು ! ತಾವೇ ಬರುತ್ತಾರೆ. ನಮ್ಮ ಜತೆಯಲ್ಲಿ ಮಾತ್ರ ಬರುತ್ತಾರೆ. ನಮ್ಮ ಮರುಪ್ರಯಾಣಗಳಲ್ಲಿ ಹಲಕೆಲವರು ಇದ್ದೇ ಇರುತ್ತಾರೆ. ಕಾಶ್ಮೀರದವರಷ್ಟೇ ಅಲ್ಲ ಪ್ರಭು ! ಬುಂದೇಲ, ವಂಗ, ಕಳಿಂಗ, ಲಾಳ, ಕಾಂಭೋಜದವರೂ ಕಾಶಿಯ ಕಡೆಯವರೂ ಕಲ್ಯಾಣದ ದಾರಿಯಲ್ಲಿ ಕೂಡುತ್ತಾರೆ. ದಕ್ಷಿಣ ಕಡೆಯವರನ್ನೂ ಕಲ್ಯಾಣಲ್ಲಿ ಕಾಣುತ್ತೇವೆ. ಹೀಗೆ ಅಸಂಖ್ಯಾತ ಪ್ರಮಥಗಣದವರು ಅಲ್ಲಿ ಬಂದಿರುತ್ತಾರೆ.

" ಇವರೆಲ್ಲ ಅಲ್ಲಿ ಬಂದು ಸೇರಿ ಏನುಮಾಡುತ್ತಾರೆ ? '

" ಅಲ್ಲಿಯ ಜ್ಞಾನಪರ್ವದಲ್ಲಿ ಭಾಗವಹಿಸಿ ಪುನೀತರಾಗುತ್ತಾರೆ ಪ್ರಭು!

" ಅಂದರೆ, ಏನು ನಡೆಯುತ್ತದೆ ಅಲ್ಲಿ ? "

" ಲಿಂಗವಂತ ಧರ್ಮದ ವಿಷಯ. "

" ಲಿಂಗವಂತ ಧರ್ಮದವರೇ ನಾವು ! ಲಿಂಗಪೂಜೆಯನ್ನು ಮನವಾರೆ ಮಾಡುತ್ತೇವೆ. ನಮ್ಮ ಮಾಹೇಶ್ವರರು ಬೋಧಿಸಿ ವೈಭವದಿಂದ ಮಾಡಿಸುತ್ತಾರೆ"

" ಪ್ರಭುಗಳು ಕ್ಷಮಿಸಬೇಕು. ಅದನ್ನು ನಾನು ಅಲ್ಲೆನ್ನುವದಿಲ್ಲ. ಹಿಮಗಿರಿಯ ಅಮರೇಶ್ವರಲಿಂಗದ ಭಕ್ತರು ತಾವು! ಆ ಲಿಂಗದ ಪ್ರತೀಕವಾಗಿರುವ ಲಿಂಗಗಳನ್ನು ಗ್ರಾಮಗಳಲ್ಲಿ ಗುಡಿಕಟ್ಟಿ ಪೂಜಿಸಲಾಗುತ್ತಿದೆ. ಮನೆಯಲ್ಲಿ ಪೂಜೆ ಸಾಧ್ಯವಾಗುವದಕ್ಕಾಗಿ ಸಂಪುಟದಲ್ಲಿರಿಸಿದ ಲಿಂಗಗಳನ್ನು ಪೀಠದಲ್ಲಿರಿಸಿ ಪೂಜಿಸಲಾಗುತ್ತಿದೆ. ಪ್ರವಾಸದಲ್ಲಿ ಸಂಗಡ ಶರೀರದ ಮೇಲೆ ಸಂರಕ್ಷಿಸಿ ಪೂಜಿಸುವದನ್ನೂ ಬಲ್ಲೆನು. ಈ ಪೂಜಾಭಕ್ತಿಯಲ್ಲಿ ಫಲಾಪೇಕ್ಷೆ ಇರಬಹುದು. ಇದಿಷ್ಟೇ ಶರಣರ ಲಿಂಗಭಕ್ತಿಯ ಉದ್ದೇಶವಾಗಿರಲಿಕ್ಕಿಲ್ಲವೆಂದು ನನ್ನ ಮತ! ನಾನು ಹೆಚ್ಚು ತಿಳಿದವನಲ್ಲ ಪ್ರಭು ! ಕಾಶ್ಮೀರದ ಪ್ರತ್ಯಭಿಜ್ಞಾತ ಮಾಹೇಶ್ವರರು ಧ್ಯಾನದಿಂದ ಶಿವಸ್ವರೂಪಸಾಧನೆ ಮಾಡುವಷ್ಟಕ್ಕೆ ತೃಪ್ತರಾಗದೆ ಶಿವಜೀವರೈಕ್ಯದ

ಸಾಧನೆಯಾಗಿರುವ ಇಷ್ಟಲಿಂಗೋಪಾಸನೆಯ ಕ್ರಮವನ್ನು ಅರಿತು ಅನುಭವಿಸಲು ಅವರು ಕಲ್ಯಾಣಕ್ಕೆ ನಡೆದಿದ್ದಾರೆ. ಆಧ್ಯಾತ್ಮಿಕತೆಯನ್ನೊಳಗೊಂಡು ಮಾನವರ ಸರ್ವಮುಖದ ಧರ್ಮಾಧರ್ಮ ನಿರ್ಣಯಗಳನ್ನು ಸ್ವತಂತ್ರವಾಗಿ ಪರ್ಯಾಲೋಚಿಸಿ ರೂಪಿಸುತ್ತಿದ್ದಾರೆ ಅನುಭಾವಿಗಳು ಕಲ್ಯಾಣದ ಅನುಭವ ಮಂಟಪದಲ್ಲಿ! ಬಸವಣ್ಣನವರು ಈ ಕಾರ್ಯಸಂಘಟಕರೂ ನೇತಾರರೂ ಆಗಿದ್ದಾರೆ. ಧರ್ಮದ ನಿಜಸ್ವರೂಪವನ್ನು ಅರಿಯಲು ಅವಕಾಶವಿಲ್ಲದೆ ಬಾಯಾರಿರುವ, ಹಾಗು ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಹಿಂಸೆ ಅನ್ಯಾಯ ಶೋಷಣೆಗಳನ್ನು ಕಷ್ಟದಿಂದ ಸಹಿಸಿಕೊಂಡಿರುವ ದೀನದುಃಖಿಗಳಿಗಾಗಿ ಬಸವಣ್ಣನವರ ಮನಸ್ಸು ಅಪಾರವಾಗಿ ಮರುಗಿರಬೇಕು; ಹೃದಯ ಕುದಿದಿರಬೇಕು. ತಾವು ಶ್ರೇಷ್ಠ ವರ್ಣದಲ್ಲಿ ಹುಟ್ಟಿದ್ದರೂ ಆ ವರ್ಣಾಭಿಮಾನವನ್ನು ತಿರಸ್ಕರಿಸಿ ತ್ಯಜಿಸಿ ಸರ್ವರನ್ನೂ ಸಮಾನರೆಂದು ಸಾರುವ ಮಾನವಧರ್ಮವನ್ನು ಜೀವಂತಗೊಳಿಸುತ್ತಿದ್ದಾರೆ. ಮಾನವತೆಯನ್ನು ದೈವತ್ವಕ್ಕೆ ಏರಿಸುವ ಘನಕಾರ್ಯದಲ್ಲಿ ನಿರತರಾಗಿದ್ದಾರೆ........ "

ಕೇಳಕೇಳುತ್ತ, ನಿಂತಲ್ಲಿಯೇ ಕುಳಿತು ಚಿತ್ತಗೊಟ್ಟಾಲಿಸುತ್ತಿದ್ದ ರಾಣಿ ಗಂಗಾದೇವಿ ಸೆಟ್ಟಿಯು ಈ ಮಾತುಗಳು ತೂರಿ ಬರುವಾಗ ತನ್ನಷ್ಟಕ್ಕೆ ತಾನೇ ಕೈಮುಗಿಯುತ್ತಿದ್ದಳು. ಮಹಾದೇವ ಭೂಪನ ವದನ ಪ್ರಸನ್ನತೆಯ ಪ್ರಕಾಶ ಬೀರುವದರಲ್ಲಿತ್ತು. ಸೂರಜದೇವ ಮಂತ್ರಮುಗ್ಧನಾಗಿ ಕೇಳುತ್ತಿದ್ದನು. ಆವೇಗದಲ್ಲಿದ್ದ ಸೆಟ್ಟಿ ಮುಂದುವರಿಯುತ್ತಲೇ ಇದ್ದನು. ಅರಮನೆ, ರಾಜಸನ್ನಿಧಿ, ತನ್ನ ಸಾಧಾರಣ ವ್ಯಕ್ತಿತ್ವ, ಕಿಂಕರತ್ವ ಇದಾವದರ ಅರಿವೂ ಅವನಿಗೆ ಇರಲಿಲ್ಲ. ಬಸವ ಭಾವ ಮೈತುಂಬಿದಂತಿತ್ತು : ಮತ್ತೆರಡು ಮಾತು ಹೇಳಿದನು :

" ಬಸವಣ್ಣನವರು ಕ್ರಿಯಾಪ್ರವೃತ್ತಿಗೆ ಬಹಳ ಮಹತ್ವಕೊಡುತ್ತಿದ್ದಾರೆ. ಕರ್ತೃತ್ವ ಶಕ್ತಿಯಲ್ಲಿಯೇ ಭಕ್ತಿ ಬೆಳಗಬೇಕು. ಆ ಭಕ್ತಿಯಲ್ಲಿಯೇ ಮೂಡಿಬಂದ ಜ್ಞಾನವು ಆನಂದವಾಗಿ ಪರಿಣಮಿಸಬೇಕು. ತನು-ಮನ-ಧನಗಳ ಸೇವೆಯಲ್ಲಿಯ ಧನವು ಕಾಯಕಷ್ಟದಿಂದ ಸ್ವತಃ ಸಂಪಾದಿಸಿದ್ದಿರಬೇಕು. ಅದು ಸತ್ಯ ಶುದ್ಧವು ! ಶಿವಾರ್ಪಣೆಗೆ ತಕ್ಕುದು ಅದು ಮಾತ್ರ ! ಈ ಸಂಪಾದನೆಯ ಕ್ರಮಕ್ಕೆ ಬಸವಣ್ಣನವರು ಕಾಯಕವೆಂದಿದ್ದಾರೆ. ಧರ್ಮಕ್ರಿಯೆಗಳಲ್ಲಿ ಇದು ಅತ್ಯಂತ ಮುಖ್ಯಾಂಶವು ,,

"ನಿಜ–ನಿಜ–ನಿಜವಯ್ಯಾ........ನಿಜ! ನಿಜಕ್ಕೂ ನಿಜ!"

ರಾಜನ ಉದ್ಗಾರ ಕಿವಿಗೆ ಬಿದ್ದಾಗ ಸೆಟ್ಟಿಯ ಮೈಯಲ್ಲಿ ಪ್ರಕೃತದ ಎಚ್ಚರ ಸಂಚರಿಸಿತು. ಆತ ಕೈ ಮುಗಿದು ನುಡಿದನು :

"ದೊರೆಗಳು ಕ್ಷಮಿಸಬೇಕು. ತಮ್ಮ ಸನ್ನಿಧಿಯಲ್ಲಿ ಮಾತು ಹೆಚ್ಚಾಯಿತೇನೋ? ನಾನು ತಿಳಿದವನಲ್ಲ; ತಿಳಿದಷ್ಟನ್ನೂ ಅನುಭವದಲ್ಲಿ ಅಳವಡಿಸಿಕೊಂಡವನಲ್ಲ. ಶ್ರವಣದಿಂದ ಅರಿತ ಶಬ್ದಗಳನ್ನು ಆಡಿದೆನು ಇಷ್ಟೇ!

"ಇಲ್ಲ ಸೆಟ್ಟರೇ ನೀವು ಸರಿಯಾದುದನ್ನೇ ಹೇಳಿದಿರಿ. ನೀವು ಬುದ್ಧಿವಂತರು. ನಿಮ್ಮ ಹೃದಯ ಹಸನಾಗಿದೆ. ಅಲ್ಲಿ ಹುಟ್ಟಿ ಬರುವ ನಿಮ್ಮ ಮಾತು ನನ್ನ ಮನಸ್ಸಿಗೆ ಮುಟ್ಟಿ ದ್ರವಗೊಳಿಸಿ ಅಂತರಾಳದಲ್ಲಿ ಇಳಿಯುತ್ತಲಿವೆ; ನಾನು ಇನ್ನೂ ಕೇಳಬೇಕು; ಹೇಳಿರಿ.

"ಅಂತಹ ಯೋಗ್ಯತೆ ನನಗೆಲ್ಲಿ ಬರಬೇಕು ದೇವರು? ಅದನ್ನೆಲ್ಲ ತಾವು ತಿಳಿಯಬಯಸಿದರೆ ಅದಕ್ಕೊಂದು ಉಪಾಯವಿದೆ.

"ಏನು ಹೇಳಿರಿ, ಅದನ್ನೂ ಅಗತ್ಯವಾಗಿ ಕೈಕೊಳ್ಳುವೆವು."

"ನಮ್ಮ ಕಡೆಯ 'ಅಲ್ಲಮ' ಎಂಬ ಮಹಾಶಿವಯೋಗಿ ಕಾಶ್ಮೀರದ ಹಲವು ಕಡೆಯಲ್ಲಿ ಅನುಷ್ಠಾನದಲ್ಲಿದ್ದರು. ಇಲ್ಲಿಯ ಗಿರಿಗಹ್ವರಗಳಲ್ಲಿ ಯೋಗಸಾಧನೆಯಲ್ಲಿದ್ದ ಋಷಿ ಮುನಿಗಳಿಗೆ ಅವರು ಹೆಚ್ಚಿನ ಚೇತನ ನೀಡಿದ್ದಾರೆ. ಇಲ್ಲಿಯ ದಾರ್ಶನಿಕರ ಮೇಲೆ ಕರ್ನಾಟಕದ ಶಿವಾದ್ವೈತ ಸಿದ್ಧಾಂತದ ಪ್ರಭಾವ ಬೀರಿದ್ದಾರೆ. ಅವರು ಲೀಲಾರ್ಥವಾಗಿ ಮತ್ತೆ ದಕ್ಷಿಣದೇಶಕ್ಕೆ ಮರುಳುತ್ತಿದ್ದಾಗ ತಮ್ಮ ಶಿಷ್ಯೋತ್ತಮರೊಬ್ಬರಿಗೆ ಈ ಕಾರ್ಯ ಮುಂದುವರಿಸಲು ಆದೇಶಿಸಿದ್ದಾರಂತೆ! ಈ ಶಿಷ್ಯರೂ ದಕ್ಷಿಣದವರೇ! ಇವರ ಹೆಸರು 'ಮಲ್ಲಿಕಾರ್ಜುನರೆಂದು.' ಇವರು ಲಿಂಗಾಂಗಸಾಮರಸ್ಯ ಮಾರ್ಗದಿಂದ ಚಿಚ್ಛಕ್ತಿಯ ಬೆಳಗ ಕಂಡ ಮಹಾಯೋಗಿಗಳಂತೆ; ಇವರ ತನು–ಮನ–ಭಾವಗಳ ಪರಮ ನೈರ್ಮಲ್ಯವನ್ನು ಅರಿತು ಆನಂದಿಸಿದ ಅಲ್ಲಮದೇವರು ಇವರನ್ನು ನಿಷ್ಕಳಂಕ ನೆಂದು ಕರೆದಿದ್ದಾರೆ. ಅವರ ಶಿಷ್ಯರೂ ಇವರನ್ನು ಮುಂದೆ 'ನಿಷ್ಕಳಂಕ ಮಲ್ಲಿಕಾರ್ಜುನ' ಎಂದು ಸಂಬೋಧಿಸುತ್ತಿದ್ದಾರೆ. ಈ ಮಹಾನುಭಾವಿಗಳು ಕಲ್ಯಾಣದ ಅನುಭವಗೋಷ್ಠಿಯ ಚರ್ಚೆಯೊಡನೆಯೂ ಸಂಬಂಧ ವಿಟ್ಟುಕೊಂಡಿದ್ದಾರೆ. ಲಿಂಗಧಾರಣೆಯಲ್ಲಿಯ ತತ್ವ ವಿಶೇಷತೆಯನ್ನು ತಮ್ಮ ಅನುಯಾಯಿಗಳ ಮೂಲಕ ಪ್ರಚಾರ ಪಡಿಸು

ತ್ತಿದ್ದಾರೆ. ಅವರೀಗ ತಮ್ಮ ರಾಜ್ಯದಲ್ಲಿಯೇ ಇದ್ದಾರೆಂದು ಮೊನ್ನೆ ಮೊನ್ನೆ ಸಾಂದ್ರಶಿಲೆಯಲ್ಲಿ ನಾನು ಕೇಳಿದ್ದೇನೆ. ಅವರನ್ನು ತಾವು............"

" ಹಾಗಿದ್ದರೆ ಅದು ನನ್ನ ಭಾಗ್ಯ! ಅವರನ್ನು ಹುಡುಕಿ ಅವರ ಪಾದ ದರ್ಶನ ಪಡೆಯುವೆ. "

ಅರಸನ ಕಣ್ಣಲ್ಲಿ ಆನಂದಭಾಷ್ಪ ತುಳುಕಿತ್ತು. ಅದನ್ನು ಕಂಡ ಸೆಟ್ಟಿ ಮೂಕನಾಗಿ ಬಿಟ್ಟ! ಪುರಾಕೃತ ಪುಣ್ಯದಿಂದ ರಾಜನ ಹೃದಯಕ್ಕೆ ಶಿವಶಕಿ ಪಾತದ (ಶಿವಕೃಪೆಯ) ಉಷಃಕಿರಣ ಬಿದ್ದು ಹದವಾದ ಪರಿಸ್ಥಿತಿಯಲ್ಲಿ ಸೆಟಿ ಯಂತಹ ಸಾಮಾನ್ಯನ ಶಬ್ದಗಳ ಸುಳಿಗಾಳಿಯೂ ಆ ರಾಜನ ಹೃತ್ಕಮಲ ಕುಟ್ಮಲವನ್ನು ಅರಳಿಸಲು ಸಮರ್ಥವಾದುದು ಆಶ್ಚರ್ಯಕರವಲ್ಲ. ಆಗ ರಾಣಿ ಮುಂದಕ್ಕೆ ಬಂದು ಮಾಣಿಕ ಸೆಟ್ಟಿಗೆ ಕೈ ಮುಗಿದು—

" ಸೋದರ ಮಾಣಿಕಜಿ, ನೀವಿಂದು ಈ ಮನೆಯಲ್ಲಿ ಉಳಿದು ನಮ್ಮ ಆತಿಥ್ಯವನ್ನು ಸ್ವೀಕರಿಸಬೇಕು. "

ಸೆಟ್ಟಿ ಧಡಪಡಿಸಿ ಎದ್ದು ರಾಣಿಗೆ ಪ್ರತಿಯಾಗಿ ಬಾಗಿ ಕೈ ಮುಗಿದು

" ಮಾತಾಜಿ, ತಮ್ಮ ಈ ಗೌರವದರಕ್ಕೆ ನಾನು ಅರ್ಹನಲ್ಲ" ಎಂದನು.

ಪಟ್ಟದ ರಾಣಿಯೊಬ್ಬಳು ಅಪರಿಚಿತ ಸಾಮಾನ್ಯ ವ್ಯಾಪಾರಿಯೊಬ್ಬನಿಗೆ ಮುಂದೆಬಂದು ಈ ಆಮಂತ್ರಣ ನೀಡಿದುದನ್ನು ರೂಢಿಯ ರಾಜನಾದ ಆಕೆಯ ಪತಿ ಕಂಡಿದ್ದರೆ ಜಿಗುಪ್ಸೆಗೊಂಡು ಉದ್ರಿಕ್ತನಾಗಬಹುದಾಗಿತ್ತು. ಆದರೆ ಗಂಗಾದೇವಿಯ ಈ ಕ್ರಮ ಮಹಾದೇವರಾಜನಿಗೆ ಸಂತಸವನ್ನೇ ತಂದಿತು. ಅವನು ಕೂಡಲೆ ರಾಣಿಯ ಬಿನ್ನಹಕ್ಕೆ ತನ್ನ ಒಳಬಗೆಯ ಬೆಂಬಲದ ದನಿ ನೀಡಿ ನುಡಿದನು :

"ಅರ್ಹತೆ ಆಧಿಕಾರ ವೈಭವದಲ್ಲಿಲ್ಲ ಸೆಟ್ಟರೆ; ನೀವಿಂದು ನಮ್ಮ ಅತಿಥಿಗಳು. ಈ ಮನೆ ನಿಮ್ಮದು. ನಿಮ್ಮ ಇಂದಿನ ಕಾಯಕ ಈಗ ಪೂರೈಸಲಿ. ಸೂರಜ್ ಈಗ ನಿಮ್ಮ ಹತ್ತಿರ ಉಳಿದ ಹರಳು ಎಷ್ಟು? ಅವುಗಳ ಬೆಲೆಯೇನು ? "

ಸೂರಜದೇವನು ವಸ್ತ್ರದ ಮೇಲೆ ಹರಡಿದ ಹರಳು ನೋಡಿ.

" ಹತ್ತು ಮಾತ್ರ ಇವೆ ಪ್ರಭು! ಬೆಲೆ ಒಂಭತ್ತು ಸುವರ್ಣನಾಣ್ಯಗಳಾಗಬಹುದು "

“ ಸರಿ, ಅವುಗಳನ್ನು ಇತ್ತ ಇಡಿರಿ. ಅಷ್ಟು ಹಣವನ್ನು ನನ್ನ ಲೆಕ್ಕದಲ್ಲಿ ಭಾಂಡಾರದಿಂದ ಪಡೆಯಿರಿ. ನಾನು ಬರೆದುಕೊಡುವ ನಿರೂಪ ಲಿಂಗಾರತಿಗೆ ತೋರಿಸಿದರೆ ಅವನು ಹಣ ದೊರೆಯುವ ವ್ಯವಸ್ಥೆ ಮಾಡುವನು.” ಎಂದು ಹೇಳಿ, ರಾಣಿಯನ್ನು ಕುರಿತು: “ ಗಂಗಾ ನಮ್ಮ ಸ್ವಂತ ಸೇವೆಯಲ್ಲಿರುವ ಹತ್ತು ಜನ ಸೇವಿಕೆಯರನ್ನು ಕರೆಸು. ಅವರಿಗೆ ಈ ಒಂದೊಂದು ಹರಳು ಕೊಟ್ಟು ಸನ್ಮಾನಿಸು. ಸಂಜೆಯ ಭೋಜನಾನಂತರ ಅವರನ್ನು ನಮ್ಮ ಊಳಿಗದಿಂದ ಮುಕ್ತಗೊಳಿಸು. ಉಳಿದವರ ವಿಚಾರ ನಾಳೆಗೆ! ”

“ ಆಗಲಿ ಪ್ರಭು ! ತುಂಬ ಉಚಿತವಾದ ವಿಚಾರವಿದು. ಇಂದಿನಿಂದ ಪ್ರಸಾದವ್ಯವಸ್ಥೆಯನ್ನು ನಾನೇ ಮಾಡುತ್ತೇನೆ. ”

ಉಕ್ಕಿದ ಉತ್ಸಾಹದೊಡನೆ ರಾಣಿ ಒಳಗೆ ನಡೆದಳು. ಮಹಾದೇವರಾಜನು ಆ ಹರದರಿಗೆ ಹಣದ ನಿರೂಪ ಬರೆದುಕೊಟ್ಟು,

“ ಈ ಕೆಲಸ ಮುಗಿಸಿ ನೀವಿಬ್ಬರೂ ಮತ್ತೆ ಇಲ್ಲಿಗೆ ಬರಬೇಕು ” ಎಂದು ಕೈಮುಗಿದನು. ಅದನ್ನು ಕಂಡು ಮಾಣಿಕಸೆಟ್ಟಿ ಅವಾಕ್ಕಾಗಿ ಅಡ್ಡಬೀಳುತ್ತ ಎಂದನು :

“ ಪ್ರಭು ಅಲ್ಪನು ನಾನು. ನನಗೆ ಸಂಕೋಚವಾಗುತ್ತಿದೆ. ತಾವು ಕೈ ಮುಗಿದು ಬಿನ್ನವಿಸಬಾರದು ! ”

ಅರಸು ಅವನನ್ನು ಎತ್ತಿ ಅಪ್ಪಿಕೊಂಡು “ ನಿಮ್ಮಲ್ಲಿ ನಾನು ಕಾಣುತ್ತಿರುವದು ಒಬ್ಬ ವ್ಯಾಪಾರಿಯನ್ನಲ್ಲ. ಬಸವೇಶ್ವರನಬೆಳಕನ್ನು! ನಿಮ್ಮ ಪುಣ್ಯದಿಂದ ನನಗೆ ನಿಷ್ಕಳಂಕ ಮಲ್ಲಿಕಾರ್ಜುನನ ದರ್ಶನವಾಗಲಿ” ಎಂದನು.

ಬಾಗಿದ ತಲೆಯ ಸೆಟ್ಟಿ ಮೆಲ್ಲಗೆ ಹಿಂದೆ ಸರಿದನು. ಮೂವರ ಕಣ್ಣುಗಳೂ ಕಂಬನಿ ಕರೆದಿದ್ದವು. ಕ್ಷಣಹೊತ್ತು ಸ್ತಬ್ಧರಾಗಿ ನಿಂತು ಸರಿದು ಹೋದರು.

ಮರುದಿನ ಸೂರ್ಯದೇವನ ಧವಳಶಿಲೆಗೆ ಅವರಿಬ್ಬರು ಹೊಂಟರು

# ೪. ಅರಿವಿನ ಆತುರ

" ಕಂಡಿತು, ಮರೆಯಾಯಿತು; ಮತ್ತೆ ಕಂಡು ಮತ್ತೆಮರೆಯಾಯಿತು. ಮರೆಯಾಗಿಯೇ ಬಿಟ್ಟಿತಲ್ಲ ರಾಜನೌಕೆ ! "

" ಅದು ರಾಜನೌಕೆಯೇ ? ರಾಜಧ್ವಜವಿಲ್ಲ. ವಣಿಜರ ಡೋಣಿಯಾಗಿರಬಹುದು. ಆಚೆಯ ದಂಡೆಗೆ ಹೋಗಿರಬಹುದು. "

ಗಿರಿಶಿಖರಗಳ ಮುಂದೆಡೆಯಲ್ಲಿ ಕಿರಿಯುಗಲಿನ ತಪ್ಪಲುಭೂಮಿ! ಅದರ ಕೆಳಗೆ ಮಳಲಭೂಮಿ! ಸುಂದರವಾದ ವನಪ್ರದೇಶ ಅದು. ಅದರಾಚೆ ಸೌಧಾನದಿಯ ಪಾತ್ರ. ಅದರೊಡಲು ಮರೆಯಾಗಿತ್ತು. ಅದರ ನೀರು ಕಾಣುವ ಭಾಗ ಕೆಳಗಡೆಗಿತ್ತು. ತಪ್ಪಲು ಭೂಮಿಯ ಅಂಚಿನಲ್ಲಿ ನಿಂತು ಆ ಕಡೆಗೆ ನೋಡುತ್ತ ಇಬ್ಬರು ವಟುಗಳು ಹೀಗೆ ಮಾತನಾಡುತ್ತಿದ್ದರು. ಬೆಳಗಿನ ಗುರುಸೇವೆ ಮುಗಿಸಿದ್ದರು. ತಂಗಾಳಿಯಲ್ಲಿ ತೂರಿಬರುವ ಸೂರ್ಯಕಿರಣಗಳ ಸುಖಸ್ಪರ್ಶಕ್ಕೆ ಮೈಯೊಡ್ಡಿ ನಿಂತಿದ್ದರು. ದೂರದಲ್ಲಿ ಗಿಡಮರಗಳ ನಡುವೆ ಅಷ್ಟಷ್ಟು ಕಾಣುವ ಸೌಧಾನದಿಯ ಮಡುವಿನ ಮಂದವಾದ ಹೊನಲಿಗೆ, ಎದುರಾಗಿ ಬರುತ್ತಿರುವ ನೌಕೆಯನ್ನು ನೋಡುತ್ತಿದ್ದರು. ಕೆಲಸಮಯ ಕಳೆಯಿತು. ಅದರಿಂದಿಳಿದು ಹೂಗಿಡಗಳಲ್ಲಿ ಹಾಯ್ದು ಯಾರೂ ಮೇಲೇರಿ ಬರಲಿಲ್ಲ; ಯಾರೂ ಕೆಳಗಡೆ ತಮ್ಮ ಮುಂದೆ ಕಾಣಲಿಲ್ಲ. ' ನಿನ್ನೆ ಬಂದ ಸುದ್ದಿ ಸತ್ಯವಿಲ್ಲದಿರಬಹುದು. ನಮ್ಮ ಊಹೆ ತಪ್ಪಾಗಿರಬಹುದು ' ಎನ್ನುತ್ತ ಹಿಂದಿರುವ ತಮ್ಮ ಆಶ್ರಮಕ್ಕೆ ಮರಳುವದರಲ್ಲಿದ್ದರು. ಆದರೆ ಗಿಡಬಳ್ಳಿಗಳ ಝುಡುಪಿನಲ್ಲಿ ಹಾಯುತ್ತ, ಅಡ್ಡಲಾಗಿ ಬರುವ ತಿಳಿಬಣ್ಣದ ಹೂಗೊಂಚಲಗಳ ಜಾಲದಲ್ಲಿ ಅದೇ ತಿಳಿಬಣ್ಣದ ತಮ್ಮ ಹೂಮೊಗಗಳನ್ನು ತೂರಿಕೊಳ್ಳುತ್ತ ಈಚೆಗೆ ಬರುತ್ತಿರುವ ರಾಜದಂಪತಿಗಳನ್ನು ಗುರುತಿಸಿ ಕಾಣಲಾರದಾಗಿದ್ದರು ಆ ವಟುದ್ವಯರು.

ನದಿಯ ಒಡಲ ತಡೆಯಲ್ಲಿ ಡೋಣಿಯಿಂದಿಳಿದು ರಾಜರಾಣಿಯರು ಸಂಗಡ ಯಾರನ್ನೂ ಕರೆದುಕೊಳ್ಳದೆ ನಡೆಯುತ್ತ ಬಂದು ತಪ್ಪಲಿನಂಚನ್ನು

ಏರುತ್ತಿರುವಾಗ ನಿರಾಶರಾಗುತ್ತಿರುವ ವಟುಗಳಿಗೆ ಅವರ ಮುಂದೆಯೇ ಕಂಡು ಬಿಟ್ಟರು. ಭಸ್ಮಭೂಷಿತ ಸುಪ್ರಸನ್ನ ಮುಖಗಳು, ಶುಭ್ರದೇಹಕ್ಕೆ ಶುಭ್ರವಾದ ಸಾದಾ ಬಟ್ಟೆಗಳು, ಬರಿಗಾಲು, ಒಳಗೂ ಹೊರಗೂ ನಿರ್ಮಲ ಭಾವ ಬೆಳಗಿತ್ತು. ಸಿರಿಯ ಉಡುಗೊರೆಯು ಸೋಂಕಿರಲಿಲ್ಲ. ಮೊದಲು ನೋಡದ ವರಿದ್ದರೆ ಅವರನ್ನು ರಾಜರೆಂದು ಗುರುತಿಸುತ್ತಿರಲಿಲ್ಲ. ಮೊದಲೊಮ್ಮೆ ಮಾಂಡವ್ಯ ಪುರದಲ್ಲಿ ಮಹಾದೇವರಾಜನನ್ನು ವಟುವೊಬ್ಬನು ನೋಡಿದ್ದನು. ಅವನೇ ಈಗ ಗುರ್ತಿಸಿ ಚಕಿತನಾಗಿ 'ಇದೋ ಇಲ್ಲಿಯೇ ಬಂದಿದ್ದಾರೆ ದೊರೆಗಳು' ಎಂದನು. ಇಬ್ಬರೂ ಮುಂದೆ ಹೋಗಿ ಅವರಿಗೆ ಕೈಮುಗಿದು ಸ್ವಾಗತ ನೀಡಿದರು ರಾಜರಾಜರಾಣಿಯರು ತಲೆಬಾಗಿಸಿ ವಂದಿಸಿ, 'ಶಿವಯೋಗಿಗಳ ದರ್ಶನ ಈಗ ಸಾಧ್ಯವೇ?' ಎಂದು ಕೈಮುಗಿದು ಕೇಳಿದರು. 'ಸಾಧ್ಯವಿದೆ ಮಹಾರಾಜ. ತಾವು ಬರುವ ಸಂಗತಿ ಮೊದಲೆ ನಮಗೆ ಗೊತ್ತಾಗಿತ್ತು. ಗುರುಗಳ ಶಿವಾರ್ಚನೆ ಪೂರ್ತೈಸಿದೆ ಇಷ್ಟರಲ್ಲಿ ಹೊರಗೆ ಬರುವರು; ಬನ್ನಿ' ಎಂದು ಮುಂದಾಗಿ ಕರೆದುಕೊಂಡು ಹೋಗಿ ಗುಹೆಯ ಬಾಗಿಲ ಮುಂದೆ ಹಾಸಿದ ಕಂಬಳಾಸನದ ಮೇಲೆ ಕೂಡ್ರಹೇಳಿದರು. ರಾಜದಂಪತಿಗಳು ದೇವ ನಿರ್ಮಿತ ಕಲ್ಲುಹಾಸಿನ ಮೇಲೆ ಕುಳಿತರು.

ಕ್ಷಣಹೊತ್ತು ಕಳೆದಿರಬೇಕು. 'ಪರಮಾತ್ಮ, ಪರಮನಿರಂಜನಸಾಲ್ಲಮ ಪ್ರಭು' ಎಂಬ ಗಂಭೀರನಾದಧ್ವನಿಯೊಡನೆ ಹೊರಬಂದರು ಶಿವಯೋಗಿ ನಿಷ್ಕಲಂಕದೇವರು. ಕಾಷಾಯಾಂಬರ, ಕೊರಳರುದ್ರಾಕ್ಷಿ, ತೇಜಸ್ಸು ತುಂಬಿ ತುಳುಕುವ ಭಸ್ಮಭೂಷಿತ ಮುಖಮಂಡಲ! ಕಣ್ಣಲ್ಲಿ ಕರುಣೆಯಕಾಂತಿ ಮಿನ ಗುತ್ತಿದೆ. ಒಡನೆ ರಾಜದಂಪತಿಗಳು ಸಾಷ್ಟಾಂಗವಾಗಿ ಎರಗಿದರು.

"ಶುಭಮಸ್ತು, ಶಾಂತಿರಸ್ತು, ಏಳಿ ಮಹಾರಾಜ; ಇಲ್ಲಿ ಕಂಬಳಾಸನ ದಲ್ಲಿ ಕುಳಿತುಕೊಳ್ಳಿರಿ" ಎನ್ನುತ್ತ ಶಿವಯೋಗಿ ಕಲ್ಲುಜಗುಲೆಯಲ್ಲಿ ಕುಳಿತರು. ಫಲಪುಷ್ಪಗಳನ್ನು ಅವರಡಿಯಲ್ಲಿರಿಸಿ ರಾಜದಂಪತಿಗಳು ಕಂಬಳಿಯ ಬದಿ ಯಲ್ಲಿ ಕೆಳಗೇ ಕುಳಿತರು. ಗಂಗಾದೇವಿ ಪತಿಯ ಮಗ್ಗುಲಿಗೆ ಸ್ವಲ್ಪ ಹಿಂದೆ ಕೈಮುಗಿದು ಕುಳಿತಿದ್ದಳು. ಅವರ ಮುಖನೋಡಿ ಶಿವಯೋಗಿ ಕೇಳಿದರು:

"ಸ್ವಾಸ್ಥ್ಯವಷ್ಟೇ ಮಹಾರಾಜಾ?"

"ಇಲ್ಲ ಸ್ವಾಮೀ, ಈ ಪಾದದರ್ಶನಾಕಾಂಕ್ಷೆಯಿಂದ–ದರ್ಶನಲಾಭ ದಿಂದ-ಸದ್ಯಕ್ಕೆ ಸ್ವಲ್ಪ ಸಮಾಧಾನ ಮಾತ್ರ ಮನಸ್ಸಿಗೆ! ಇಲ್ಲದಿದ್ದರೆ ಈಗಿನ

ನಮ್ಮ ಜೀವನದಲ್ಲಿ ಮನಸ್ಸು ನೆಮ್ಮದಿಯನ್ನು ಕಾಣದಾಗಿದೆ. ತಾಯಿನಗಲಿದ ಕರುವಿನಂತೆ ಏನನ್ನೋ ಅಗಲಿದ ವಿರಹದಿಂದ ಅದು ತರಿತಪಿಸುತ್ತಿದೆ. ”

“ಶಿವನು ನಿಮಗೆ ಐಶ್ವರ್ಯ ಅಧಿಕಾರಕೊಟ್ಟಿದ್ದಾನೆ. ನಿಮ್ಮ ದೇವತಾರ್ಚನೆ ಪ್ರಜಾಪಾಲನೆಗಳ ಕರ್ತವ್ಯದಲ್ಲಿ ಚ್ಯುತಿಯಿಲ್ಲ. ಯಾಕೆ ಅಸಂತುಷ್ಟಿ ರಾಜಾ?”

“ಇವುಗಳನ್ನು ನೆನೆದರೆ ಇವುಗಳ ಕಷ್ಟ ಕಣ್ಣಮುಂದೆ ಕಟ್ಟುತ್ತಿದೆ ಸ್ವಾಮೀ! ಇವೆಲ್ಲ ನಿರರ್ಥಕ! ಇವುಗಳಲ್ಲೆಲ್ಲಿಯೂ ಶಾಂತಿ–ಸಮಾಧಾನದ ಎಡೆಯಿಲ್ಲ. ಅಂತಹ ಕಾರಣವಸ್ತುವಿಲ್ಲ. ’

“ಹಾಗಾದರೆ ಅದು ನಿನ್ನಲ್ಲಿಯೇ ಇರಬೇಕು. ನೀನು ಮರೆತಿರಬೇಕು. ಒಳಗೆ ಮುಚ್ಚಿಟ್ಟು ಮರೆತು ಹೊರಗೆ ಹುಡುಕಿದರೆ ಹೇಗೆ ಸಿಗಬೇಕು? ಮರವೆಯ ಮರೆಯಲ್ಲಿರುವ ಅದನ್ನು ನೀನು ಅರಿಯಬೇಕು ಮಹಿಷೀಯ! ”

“ಅದು ಹೇಗೆ ದೇವರು? ಅದರ ರಹಸ್ಯವೇನು ತಿಳಿಸಬೇಕು. ತಮ್ಮ ಪಾದಸನ್ನಿಧಿಗೆ ಶರಣು ಬಂದಿದ್ದೇವೆ ”

ಗಂಗಾದೇವಿ ನಡುವೆ ಪ್ರವೇಶಿಸಿ ತಲೆಬಾಗಿ ಕೇಳಿದಳು. ನಿಷ್ಕಲಂಕ ದೇವರು ಎತ್ತನೋಡಿ ಅಂದರು :

“ ಆಲಿ ತಾಯಿ ಕೇಳಿರಿ; ಆದರೆ ಅದನ್ನು ಒಂದುದಿನ ಒಂದಿಷ್ಟು ವೇಳೆಯಲ್ಲಿ ವಿವರಿಸಲಿಕ್ಕೆ ಆಗದು. ”

“ನಾಳೆ ನಾಡದು ಆಗಲಿ ದೇವರು. ಮತ್ತೆ ಮತ್ತೆ ಬರುತ್ತೇವೆ. ಪೂರ್ಣವಾಗಿ ವಿವರಿಸುವ ಕೃಪೆಯಾಗಬೇಕು. ”

“ ನಿತ್ಯವೂ ಕಷ್ಟಕರವಾದ ಪ್ರಯಾಣ ನಿಮಗೆ ಹೇಗೆಸಾಧ್ಯ? ಪರಿಚಾರಕರನ್ನೂ ಸಂಗಡ ಕರೆತಂದಿಲ್ಲ ”

“ ಸಾಧ್ಯವಿದೆ ಸ್ವಾಮೀ! ಇದೇ ಸೌಧಾನದಿಯ ಆಚೆಯ ದಂಡೆಯಲ್ಲಿ ಕೆಳಗಡೆ ಕೆಲವಂತರದಲ್ಲಿಯೇ ಮಾಂಡವ್ಯಪುರ! ಸನ್ನಿಧಿಯ ಬೀಡಾರವನ್ನು ಶೋಧಿಸುತ್ತಿರುವಾಗ, ಇಷ್ಟು ಸನಿಹದಲ್ಲಿಯೇ ದಯಮಾಡಿಸಿದ್ದುದು ನಿನ್ನೆಯೇ ಗೊತ್ತಾಯಿತು ಇದು ನಮ್ಮ ಭಾಗ್ಯವೆಂದು ಭಾವಿಸುತ್ತೇವೆ. ಬಂಡೆಗಳ ತಡೆಯಿಂದ ನದಿಯು ನಡುಗೊಂಡು ಮಂದವಾಗಿ ಹರಿಯುವಲ್ಲಿ ದೋಣಿಯಿಂದ ದಾಟುವದು ಸುಲಭವಾಗಿದೆ. ” ಎಂದನು ಮಹಾದೇವರಾಜ.

‘ ಪರಿಪಕ್ವವಾಗುತ್ತಿರುವ ಸದ್ಭಾವದ ಆತುರಕ್ಕೆ ಎಲ್ಲವೂ ಸುಲಭ ” ಎಂದು ನುಡಿಯುತ್ತಿರುವ ಶಿವಯೋಗಿಗಳ ಮುಖದಲ್ಲಿ ಮೂಡಿದ ಮಂದಸ್ಮಿತದ

ಬೆಳಕು ರಾಜರಾಣಿಯರ ಚಿತ್ತಕ್ಕೆ ಹರ್ಷದಭಿಷೇಕ ಮಾಡಿತು. ಅವರು ಓರಣ ವಾಗಿ ಕುಳಿತರು. ದೃಷ್ಟಿಮನಗಳನ್ನು ಶಿವಯೋಗಿಯ ಸನ್ನಿಧಿಯಲ್ಲಿ ಕೇಂದ್ರೀ ಕರಿಸಿದರು. ಸಂಭಾಷಣೆಗಳಲ್ಲಿ ಕನ್ನಡ ಮತ್ತು ಕಾಶ್ಮೀರೀ ಪ್ರಾಕೃತ-ಭಾಷೆ ಗಳ ಬಳಕೆ–ಅನುವು ಬಂದಂತೆ-ಆಗುತ್ತಿತ್ತು. ಶಿವಯೋಗಿ ನಿಷ್ಕಲಂಕ ಮಲ್ಲ ದೇವರು ಹೇಳಿದರು:

" ಮಾನವನಿಗೆ ತನ್ನತನದ ಅರಿವು ಮೊದಲು ಆಗಬೇಕು. ತನ್ನ ನಿಜ ಸ್ವರೂಪದ ಜ್ಞಾನವಿಲ್ಲದೆ, ದೇಹವೇ ತಾನೆಂದು ಕಷ್ಟಪಡುತ್ತಿದ್ದಾರೆ ಅಜ್ಞಾನಿ ಮಾನವರು ! ಆ ಜ್ಞಾನವಿಲ್ಲದಿದ್ದರೆ ಸಕಲೈಶ್ವರ್ಯಸಂಪನ್ನವಾದ ಸಂಸಾ ರವೂ ತೀರದ ದಾಹದಿಂದ ಮನುಷ್ಯನನ್ನು ಬೇಯಿಸುತ್ತಿದೆ. ವೈಭವೋತ್ಸವ ಗಳಿಂದ ಅಂಧಶ್ರದ್ಧೆಯ ಜಂಗಮ ದಾಸೋಹಾದಿ ಕರ್ಮಗಳಿಂದ ಶಾಶ್ವತ ಸುಖವು ಸಿಗಲಾರದು,........ "

" ಬರಿಯ ಜ್ಞಾನ ಮಾತ್ರ ಸಾರ್ಥಕವೇ ದೇವಾ ? "

" ಜ್ಞಾನವೆಂದರೆ ಹೇಳುವ ಕೇಳುವ ಬರಿಯ ಶಬ್ದಜ್ಞಾನವೆಂದಲ್ಲ. ಅಷ್ಟು ಮಾತ್ರದಿಂದಲೇ ಯಾವ ಪ್ರಯೋಜನವೂ ಇಲ್ಲ. ಶಬ್ದಜ್ಞಾನವು ಕ್ರಿಯಾ ಸಾಧನೆಯಿಂದ ತನ್ಮಯತೆಯನ್ನು ಪಡೆಯಬೇಕು. ಆಗ ಸ್ವರೂಪಜ್ಞಾನವಾಗು ವದು. ಅದು ಆನಂದಮಯ ! "

" ಶಬ್ದ ಜ್ಞಾನವಾದರೂ ಮೊದಲು ಬೇಕಷ್ಟೆ ! "

" ಅಗತ್ಯವಾಗಿ ಬೇಕು. ಅದೇ ಹೇಳುತ್ತೇನೆ: ಶಬ್ದಜ್ಞಾನದಿಂದಲೇ ಸಾಧನೆ ಆರಂಭವಾಗುವದು; ನಿಶ್ಶಬ್ದಜ್ಞಾನದ ನಿಲವು ನಿಲುಕಡೆಗೊಳ್ಳುವದು. ನಾನೀಗ ಹೇಳುವದು ಶಬ್ದಜ್ಞಾನ ಮಾತ್ರವೇ ಅಲ್ಲವೇ ? ಅದನ್ನೇ ಮೊದಲು ಕೇಳಬೇಕು. ಧರ್ಮತತ್ವಗಳ ವಿಚಾರ ನೀವು ಬಲ್ಲವರಿದ್ದೀರಿ. ಪರಶಿವನ ಅಧಿ ಷ್ಠಾನದಲ್ಲಿ-ಆತನ ಪ್ರಕಾಶದಲ್ಲಿ–ತೋರಿಬರುತ್ತಿರುವ ಈ ಜೀವ ಜಗತ್ತುಗಳು ಆ ಶಿವನ ಅಂಶಗಳೇ ! ಶಿವನು ಭಕ್ತ ದೇಹಿಕ ದೇಹಿ ; ದೇಹವು ಜೀವ ನಿಗೆ ದೇವಾಲಯ. ಜೀವನು ವಿಕಾಸಹೊಂದುವದಕ್ಕಾಗಿ ತನ್ನ ವಿಕಾಸ ಸ್ವರೂಪದ ದೇವನನ್ನು ಉಪಾಸಿಸುವದಕ್ಕೆ ದೇಹವು ಆಧಾರಭೂತವಾಗಿದೆ.... "

" ಜೀವನೇ ಶಿವನೆಂದು ತಾವು ಹೇಳುವದು ? "

ಮಹಾದೇವರಾಜ ನಡುವೆ ಕೇಳಿದನು. ಕೂಡಲೆ ಶಿವಯೋಗಿ ಉತ್ತರಿಸಿದರು:

“ ಹೌದು; ಆದರೆ ಮಲತ್ರಯದ ಲೇಪವಿರುವವರೆಗೆ ಅಲ್ಲ. ಮಾಯಾ ಮೂಲವಾದ ಆಣವ, ಮಾಯಾ, ಕಾರ್ಮಿಕವೆಂಬ ಮಲಗಳ ಲೇಪದಿಂದ ಶಿವನಂಶಿಕನಾದ ಜೀವನು ಬೇರೆಯಾಗಿದ್ದಾನೆ. ಕೊಡ ಒಡೆದಾಗ ಕೊಡ ದೊಳಗಿನ ಬಯಲು ಮಹಾಬಯಲ ಬೆರೆವಂತೆ ಮಲತ್ರಯು ನಾಶವಾದಾಗ ಜೀವನು ಶಿವನಾಗಿ ಶಿವನಲ್ಲಿ ಬೆರೆಯುತ್ತಾನೆ. ಈ ಮಾಯಾ ಮೂಲವಾದ ಮಲವು ಮಾನವನಿಗೆ ಮಹಾಸಮಸ್ಯೆಯಾಗಿದೆ. ಅದು ಸುಲಭವಾಗಿ ಹೋಗು ವಂಥದೂ ಅಲ್ಲ. ಅಸಂಖ್ಯ ಜನ್ಮಗಳಿಂದ ಅಂಟಿಕೊಂಡುಬಂದಿದೆ. ಜ್ಞಾನಕ್ರಿಯೆ ಗಳ ಸಮನ್ವಯದ ಸಾಧನೆಯಿಂದ ಅದನ್ನು ಸವಿಸಬೇಕು. ಆ ಸಾಧನೆಗೆ ಭಕ್ತಿಯ ಆಶ್ರಯ ಬೇಕು. ಈ ಮೂರರ ಯೋಗದಿಂದ ಅದು ಸಾಧ್ಯವಾದಾಗ ಶಿವಯೋಗ ವಾಗುತ್ತದೆ ; ಲಿಂಗಾಂಗ ಸಾಮರಸ್ಯವಾಗುತ್ತದೆ........ ಗುರು ಅಲ್ಲಮಪ್ರಭು ಶಿವಯೋಗಸಿದ್ಧರು.........ಅವರ ಕಾಣುವ ಕಾಯ ಪ್ರಸಾದಕಾಯ ಪ್ರಕಾಶದ ಪ್ರತೀಕ ಃ ........ ಗುರು ಅಲ್ಲಮಲಿಂಗರು ನಿಷ್ಕಲನಿರಂಜನರು' ನಿಶ್ಶೂನ್ಯರು. ಪರಂಜ್ಯೋತಿ ಅವರು ........ ಜ್ಯೋತಿ ಮುಟ್ಟದಲ್ಲಿಲ್ಲ ಜ್ಯೋತಿ, ನಿರ್ಮಲ ಜ್ಯೋತಿ ........ ನಿ........ರ್ಮ........ ಲ.....·........”

ಕಡೆಕಡೆಯ ಮಾತುಗಳು ರಾಜದಂಪತಿಗಳಿಗೆ ತಿಳಿಯದಾಗಿದ್ದವು. ದನಿಯೂ ಬದಲಾಗತ್ತ ಬಂದಿತ್ತು. ಕುತೂಹಲದಿಂದ ಅವರು ಹುಬ್ಬೆತ್ತಿ ನಿಷ್ಕಲಂಕ ಮಲ್ಲದೇವರನ್ನು ನೋಡಿದಾಗ ಅವರ ಮುಖಮುದ್ರೆಯಿಂದ ಅವರು ತಮ್ಮನ್ನು ಕುರಿತು ಹೇಳುತ್ತಿಲ್ಲವೆನಿಸಿತು. ಅವರ ದೃಷ್ಟಿ ಶೂನ್ಯದ ಕಡೆಗಿತ್ತು. ನಿರೂಪಣೆಯ ಹಸ್ತವಿನ್ಯಾಸ ಆಗಲೇ ನಿಂತುಹೋಗಿತ್ತು. ದನಿ ಕುಗ್ಗುತ್ತ ಬಂದು ಮೆಲ್ಲಗೆ ಅಂತರ್ಧಾನಗೊಂಡಿತು ವಾಯುಸಂಚಾರ ಅಡಗಿತು. ಇಂತಹ ಸಂದರ್ಭಗಳ ಪರಿಚಯವುಳ್ಳ ಆ ಇಬ್ಬರು ವಟುಗಳು ಓಡಿಬಂದು ಗುರುವಿನ ಪ್ರಾಕೃತಿಕ ದೇಹರಕ್ಷಣೆಗಾಗಿ ಎಡಬಲದಲ್ಲಿ ನಿಂತರು.

ಮಹಾದೇವರಾಜ-ಗಂಗಾದೇವಿಯವರು ಚಕಿತರಾದರು. ಅವರ ತನು ಪುಳುಕಿತವಾದವು. ಒಳಬಗೆ ಉಕ್ಕಿ ಬಂದು ಮೈಮರೆತು ಪರವಶರಾದರು. ‘ನಿಷ್ಕಲಂಕ ಮಲ್ಲಿಕಾರ್ಜುನಾ' ಎಂದು ಕೈಯೆತ್ತಿ ನಮಿಸಿ ಮಹಿಗೆ ಮೈಯಿ ಕ್ಕಿದರು. ಎದ್ದಾಗ ಮೈಯಲ್ಲಿ ಬೆವರು ಬಂದಿತ್ತು; ಕಂಬನಿ ಉದುರಿದ್ದವು. ಕೈಮುಗಿದು ನೆಟ್ಟದೃಷ್ಟಿಯಿಂದ ನೋಡುತ್ತ ಮೌನವಾಗಿ ಕುಳಿತರು.

ಒಂದು ಗಳಿಗೆಗೆ ಸಮಾಧಿ ಇಳಿದು ನಿಷ್ಕಳಂಕ ದೇವರು ಪ್ರಕೃತಕ್ಕೆ ಬಂದರು. ಪ್ರಾಣವಾಯು ಸಂಚರಿಸಿತು. ಕಣ್ಣರಳಿಸಿ ಮುಂದಿರುವ ಆ ಜಿಜ್ಞಾಸುಗಳನ್ನು ನೋಡಿದರು. ಫಲಪುಷ್ಪಗಳನ್ನು ಕೈಯಲ್ಲಿ ಹಿಡಿದೆದ್ದು ನಿಂತು 'ನಿಮ್ಮ ಮರುಪ್ರಯಾಣದ ವೇಳೆಯಾಯಿತು ಮಹಾರಾಜ' ಎಂದರು. ಆ ಭಾವವನ್ನರಿತು ನಮಿಸಿ ನಿಂತ ರಾಜದಂಪತಿಗಳ ಉಡಿಗೆ ಅವುಗಳನ್ನು ನೀಡಿ ಒಳಗೆ ನಡೆದರು.

## ೫. ಗುರುಕಾರುಣ್ಯ

ಮರುದಿನ ಮುಂಜಾನೆ ನಿಷ್ಕಲಂಕ ಮಲ್ಲಿಕಾರ್ಜುನ ದೇವರು ತಪ್ಪಲಿನಂಚಿಗೆ ತಾವೇ ಬಂದು ನಿಂತು, ಮಹಾದೇವ–ಗಂಗಾದೇವಿಯರ ಬರುವ ನಿರೀಕ್ಷಿಸುತ್ತಿದ್ದರು. ಶಿವನತ್ತ ಒಲಿದರೆ ಶಿವ ಅವರತ್ತ ಒಲಿಯದಿರುವನೇ? ಆ ದಂಪತಿಗಳು ನಿನ್ನಿನ ದಿನವನ್ನೆಲ್ಲ ತದೇಕ ಧ್ಯಾನದಲ್ಲಿಯೇ ಕಳೆದಿದ್ದರು. ಅವರ ಈ ಹಂಬಲವು ಶಿವ ಕಾರುಣ್ಯದ ನಿದರ್ಶನವಾಗಿತ್ತು. ಪ್ರಥಮದರ್ಶನದಲ್ಲಿಯೇ ಶಿವಯೋಗಿಯ ಸ್ವಾನಂದ ಸ್ವರೂಪ ಕಂಡು ಪ್ರಭಾವಿತರಾಗಿದ್ದರು. ಇಂದು ಬೆಳಗಿನಲ್ಲಿ ಬೇಗನೇ ಶುಚಿಯಾಗಿ ಶಿವಲಾಂಛನ ಭೂಷಿತರಾಗಿ ಬಂದಿದ್ದರು ಅವರು ಡೋಣಿಯಿಂದಿಳಿದು ದಾರಿಯ ಅರಿವಿಲ್ಲದೆ ವೇಗವಾಗಿ ಆಶ್ರಮಕ್ಕೆ ಧಾವಿಸುತ್ತಿದ್ದರು ತಪ್ಪಲಿನಂಚನ್ನು ತ್ವರಿತವಾಗಿ ಏರಿದಾಗ, ತಮ್ಮ ಭಾವ–ಮನ–ನೇತ್ರಗಳಲ್ಲಿ ತುಂಬಿದ್ದ ನಿಷ್ಕಲಂಕದೇವರನ್ನು ನೇತ್ರದೆದುರಿನಲ್ಲಿ ಕಲ್ಪನೆಯಿಲ್ಲದೆ ಕಂಡಾಗ ಗಕ್ಕನೆ ನಿಂತರು. ನಿಷ್ಕಲಂಕರು ನಸುನಗುತ್ತ 'ಬನ್ನಿರಪ್ಪ, ಬನ್ನಿತಾಯಿ' ಎಂದು ಕೈಗಳನ್ನೆತ್ತಿ ಕರೆಯಲು ಅವರು ಅಲ್ಲಿಯೇ ಸಾಷ್ಟಾಂಗವಾಗಿ ವಂದಿಸಿದರು. ಶಿವಯೋಗಿ ಆಶೀರ್ವದಿಸಿ ಎಬ್ಬಿಸಿ ಮುಂದಾಗಿ ಕರೆದೊಯ್ದರು. ಗುಹೆಯ ಒಳಮುಗ್ಗಲು ಚಾಪೆಯ ಮೇಲೆ ಕುಳ್ಳಿರಿಸಿ ಹಾಲು ಹಣ್ಣುಗಳನ್ನು ಸ್ವಹಸ್ತದಿಂದ ನೀಡಿದರು. ಪ್ರತಿಮಾತಾಡಲು ಅವಕಾಶವೇ ಇಲ್ಲ ಶಕ್ತಿಯೂ ಸಾಲದು. ರಾಜರಾಣಿಯರು ಮೌನವಾಗಿ ಸ್ವೀಕರಿಸಿ ಬಂದರು. ಅಷ್ಟರಲ್ಲಿ ಹೊರಗೆ ಬಂದು ಆಸನಸ್ಥರಾಗಿದ್ದ ಶಿವಯೋಗಿಗಳಡಿಯಲ್ಲಿ ತಾವು ತಂದಿದ್ದ ಫಲಾದಿಗಳನ್ನಿಟ್ಟು ವಂದಿಸಿ ತಮ್ಮ ಸ್ಥಳಗಳಲ್ಲಿ ಕುಳಿತರು. ನಿನ್ನೆ ನಿಂತ ವಿಷಯವನ್ನು ಶಿವಯೋಗಿಗಳು ಮುಂದುವರಿಸಿದರು.

'ಲಿಂಗಾಂಗಯೋಗವು ನಿತ್ಯ ಸುಖವು! ಇದುವೇ ಶಿವ ಜೀವರ ಐಕ್ಯವು ಲಿಂಗಾಂಗ ಸಾಮರಸ್ಯಜ್ಞಾನದ ಪರಿಪೂರ್ಣತೆಯಲ್ಲಿ ಅಂದರೆ ಆ ಜ್ಞಾನದ ಕೊನೆಯ ಮೊನೆಯಲ್ಲಿ ಶಿವಜೀವರೈಕ್ಯವಿದೆ. ಇವಕ್ಕೇ ಶಿವಜ್ಞಾನವೆನ್ನುವರು. ಶಿವಜೀವರೈಕ್ಯ ಬೋಧಾತ್ಮಕಜ್ಞಾನದಲ್ಲಿ ವಿಹರಿಸುವವರು ವೀರಶೈವರು. ಶಿವ

ಜ್ಞಾನವು ಕೇವಲ ಶಬ್ದಜ್ಞಾನವಾಗಿರದೆ ಶಿವಕ್ರಿಯೆಯಿಂದ ಸಮನ್ವಯಗೊಂಡಿದೆ. ಶಿವಜ್ಞಾನ-ಶಿವಕ್ರಿಯೆಗಳಿಗೆ ಮುಖ್ಯ ಜೀಜನವಾಗಿ ಶಿವಭಕ್ತಿಯು ಅವುಗಳನ್ನು ಮುಂದುವರಿಸಿ ಅವುಗಳಿಂದ ತನ್ಮಯತೆಯನ್ನು ಹೊಂದುವದು. ಈ ತತ್ವದ ಮತವು ಅದ್ವೈತವಾದರೂ ಕೇವಲಾದ್ವೈತವಲ್ಲ. ದ್ವೈತವನ್ನು ಹಿಡಿದು ಅದ್ವೈತವನ್ನು ಸಾಧಿಸಬೇಕು. ಇದು ಮಲತ್ರಯಸ್ವರೂಪದ ಅಜ್ಞಾನವಶ ದಿಂದ ಬೇರೆಬೇರೆಯಾಗಿ ತೋರುವ ಶಿವಜೀವರಲ್ಲಿ ಐಕ್ಯವನ್ನುಂಟು ಮಾಡು ವದು. ಬೀಜವು ಗಿಡವಾಗುತ್ತದೆ. ಬೀಜದಲ್ಲಿ ಗಿಡವಾಗುವ ಸ್ವಭಾವ ಅಥವಾ ಶಕ್ತಿಯು ಇರಲೇಬೇಕಷ್ಟೇ! ಗಿಡದಿಂದಲೇ ಬೇರೆಯಾಗಿರುವ ಬೀಜದಲ್ಲಿ ಇಡೀ ಗಿಡವೇ ಹುದುಗಿಕೊಂಡಿರುವದು. ಗಿಡ-ಬೀಜಗಳಲ್ಲಿರುವ ಈ ತಾದಾತ್ಮ್ಯ ಸಂಬಂಧವೇ ಶಿವಜೀವರಲ್ಲಿರುವದು. ಬೀಜವು ಸೊಪ್ಪಿಯನ್ನೊಡೆದು ಅಂಕು ರಿಸಿ, ವಿಕಾಸಗೊಂಡು ಪಲ್ಲವಿಸಿ ಮರವಾಗುವದಕ್ಕೆ ನೆಲ ನೀರು ಗೊಬ್ಬರ ಮುಂತಾದ ಸಾಧನಗಳೂ ಕೆಲವೊಂದು ಬೇಸಾಯವೂ ತಕ್ಕಷ್ಟು ಸಮಯವೂ ಬೇಕಾಗುತ್ತದೆ. ಆಗ ಬೀಜದಲ್ಲಿರುವ 'ಸ್ವಭಾವ ಅಥವಾ ಶಕ್ತಿಯು ಅದನ್ನು ಗಿಡವಾಗಿಸುತ್ತದೆ. ಹಾಗೆಯೇ ಜೀವನು ತನ್ನ ಆವರಣವನ್ನು ಭೇದಿಸಿ, ವಿಕಾಸ ಹೊಂದಿ ಶಿವನಾಗುವದಕ್ಕೆ ಜ್ಞಾನ ವಿಚಾರಗಳ ಸಾಧನಗಳೂ ಕೆಲವೊಂದು ಕ್ರಿಯೆಯೂ ಸಮಯವೂ ಬೇಕು. ಆಗ ಜೀವನಲ್ಲಿರುವ ಪರಮಾತ್ಮಶಕ್ತಿಯೇ ಭಕ್ತಿಯಾಗಿ ಅವುಗಳಿಂದ ಆ ಜೀವನನ್ನು ಶಿವನಾಗಿಸುವದು. ಈ ಸಾಧನೆಯಲ್ಲಿ ದೇಹವು ಮಹತ್ವದ್ದಾಗಿದೆ. ಅದನ್ನು ಹೀನಾಯವಾಗಿ ಕಾಣಬಾರದು. ಅದು ಜೀವ ನಿಗೆ ದೇವಾಲಯ. ಜೀವನು ವಿಕಾಸಹೊಂದುವದಕ್ಕಾಗಿ ತನ್ನ ವಿಕಾಸಸ್ವರೂಪ ದೇವನನ್ನು ಉಪಾಸಿಸುವದಕ್ಕೆ (ಮೇಲೆಹೇಳಿದ ಜ್ಞಾನ-ಕ್ರಿಯೆಗಳ ಸಾಧನೆಗೆ) ದೇಹವು ಆಧಾರಭೂತವಾಗಿರುವದು. ಅಂದರೆ ಜೀವಬೀಜವು ಪರಮವೃಕ್ಷವಾಗು ವದಕ್ಕೆ ನಡೆಯಬೇಕಾಗಿದ್ದ ಕೃಷಿಗೆ ದೇಹವು ಭೂಮಿಯಾಗಿರುವದು. ವೃಕ್ಷ ಹುಲಸಾಗಿ ಪಲ್ಲವಿಸುವದಕ್ಕೆ ಭೂಮಿಯನ್ನು ಕೆಲವು ಕ್ರಿಯೆಗಳಿಂದ ಹದಗೊ ಳಿಸುವದು ಅಗತ್ಯವಿರುವಂತೆ ಶಿವಯೋಗಸಿದ್ಧಿಗಾಗಿ ದೇಹವನ್ನೂ ಸಂಸ್ಕರಿಸಿ ಶುದ್ಧಗೊಳಿಸುವದೂ ಅಗತ್ಯ. ಗುರುವು ಲಿಂಗದೀಕ್ಷಾಸಂಸ್ಕಾರದಿಂದ ಶಿಷ್ಯನ ಸ್ಥೂಲ- ಸೂಕ್ಷ್ಮ- ಕಾರಣದೇಹಗಳನ್ನು ಶುದ್ಧಗೊಳಿಸುವನು. ಆಗ ಜೀವನು ಪರಿಶುದ್ಧನಾಗುವನು ತಾನೆ! ಬಳಿಕ ಆ ಶುದ್ಧಜೀವನು ಪರಮಾತ್ಮ ಸ್ವರೂಪ ಸಾಧನೆಯ ಭಾವದಿಂದ ಕೈಕೊಳ್ಳುವ-ನಡಿಸುವ-ವೃತ್ತಿಗಳೆಲ್ಲ ಶಿವಪೂಜೆಯೇ

ಆಗಿರುವವು. ಭೋಗಗಳೆಲ್ಲ ಶಿವಪ್ರಸಾದವಾಗಿರುವವು. ಸಂಸಾರವು ಸ್ವರ್ಗ ವಾಗಿರುವದು. ಇಂತಹ ಪ್ರಸಾದಭೋಗಿಯಾದವನು ಜೀವನಾಗಿ ಉಳಿ ಯುನು; ಶಿವನಾಗಿ ಬಿಡುವನು. ಇದು ಶಿವಾದ್ವೈತ ದರ್ಶನದ ಸ್ವಲ್ಪಪರಿ ಚಯ! ಇದು ಸಾಧನೆಯಲ್ಲಿರುವಾಗ ಪ್ರಗತಿಯೊಡನೆ ಅದರ ಸ್ವರೂಪವಿವರ ಣೆಯನ್ನು ದೀಕ್ಷಾಸಂಸ್ಕಾರದಲ್ಲಿಯೂ ಆ ಬಳಿಕವೂ ಉಪದೇಶಿಸಿದರೆ ಅಂತಃ ಕರಣಕ್ಕೆ ವಾಸ್ತವಿಕವಾಗಿ ಎರಕವಾಗುವದು............"

ಶಿವಯೋಗಿಯ ಮಾತಿಗೆ ವಿರಾಮವಾಯಿತು. ಸತಿಪತಿಗಳು ಒಬ್ಬರ ಮುಖವನ್ನೊಬ್ಬರು ನೋಡಿರಲಿಲ್ಲ. ಒಂದೇ ಪ್ರೇರಣೆ ಇಬ್ಬರಂತಃಕರಣಗಳನ್ನೂ ಒಂದು ಗೂಡಿಸಿದ್ದವೇನೋ, ಇಬ್ಬರೂ ಒಮ್ಮೆಲೆ ಎದ್ದು ನಿಷ್ಕಲಂಕ ದೇವರ ಪಾದಕ್ಕೆರಗಿ 'ಸ್ವಾಮೀ, ನಮಗೆ ಆ ಲಿಂಗದೀಕ್ಷಾಸಂಸ್ಕಾರವನ್ನಿತ್ತು ಬೆಳಕ ನೀಡಿ ಕಾಪಾಡಬೇಕು' ಎಂದು ಬೇಡಿಕೊಂಡರು.

ಶಿವಯೋಗಿ ಜಗುಲಿಯಿಂದ ಕೆಳಕ್ಕೆ ಸರಿದು ಕುಳಿತು, ಅವರನ್ನು ತಲೆ ಹಿಡಿದೆಬ್ಬಿಸಿ ಅವರ ಕೈಗಳನ್ನು ಅಮುಚಿ ಹಿಡಿದು– '.ತಥಾಸ್ತು ಮಕ್ಕಳೆ, ಶಿವಕರುಣೆಯ ಕಿರಣ ನಿಮ್ಮ ಹೃದಯಗಳಲ್ಲಿ ಮೂಡಿದೆ. ಶಿವಪಥಕ್ಕೆ ನೀವು ಸಮರ್ಥರು. ನಿಮ್ಮಂದದ ಅಧಿಕಾರಿಗಳು ಇನ್ನಿಲ್ಲ. ಏರ್ಪಾಡು ಮಾಡುತ್ತೇನೆ" ಎಂದರು.

ಮೂವರ ಕಣ್ಣುಗಳಲ್ಲಿಯೂ ನೀರು ಬಂದಿತ್ತು. ಮೆಲ್ಲನೆ ಅವರ ಕೈಗಳು ಬೇರೆಯಾದವು. ಸ್ವಾಮಿ, ಮುಖವೆತ್ತಿ ಮುಗಿಲ ನೋಡಿ 'ವೇಳೆಯಾಗಿದೆ ಈಗ ಅಪ್ಪಣೆ ಸ್ವಕೊಳ್ಳಿರಿ ' ಎಂದು ಕುಳಿತಲ್ಲಿಯೇ ಫಲಾದಿಗಳನ್ನು ಅವರ ಉಡಿಯಲ್ಲಿ ಹಾಕಿ, ಆಶೀರ್ವದಿಸಿ, ಎದ್ದು ಗವಿಯೊಳಗೆ ಹೋದರು.

ಮೂರನೆಯ ದಿನವೂ ಮಹಾದೇವರಾಜ–ಗಂಗಾದೇವಿಯರು ಹಾಗೆ ಬಂದು ಗುರುಸನ್ನಿಧಿಯಲ್ಲಿ ಮನದೆರೆದು ಮಾತನಾಡುತ್ತ ಕುಳಿತಿದ್ದರು. ನಿಷ್ಕಲಂಕ ದೇವರು ಕುತೂಹಲದಿಂದ ಕೇಳಿದರು :

"ರಾಜ, ನಿನ್ನೆ ನಾನು ಬಹಳಷ್ಟು ಕನ್ನಡದಲ್ಲಿಯೇ ಮಾತನಾಡಿದೆನು. ಎಲ್ಲ ವಿಚಾರಗಳು ಸರಿಯಾಗಿ ತಿಳಿದವೇ?"

" ತಿಳಿದವು ಗುರವೇ! ತಾವು ಕನ್ನಡದಲ್ಲಿಯೇ ಮಾತನಾಡುವದರಿಂದ ನನಗೊಂದು ಪ್ರಯೋಜನವಿದೆ. ಕನ್ನಡಭಾಷೆಯಲ್ಲಿ ನಡೆವ ಅನುಭವಗೋ

ಷ್ಠಿಯ ಚರ್ಚೆಯಲ್ಲಿಯ ಧಾರ್ಮಿಕವಿಷಯ ತಿಳಿಯುವದಕ್ಕೂ ಮತ್ತೆ ಮಾತನಾಡುವದಕ್ಕೂ ಅಭ್ಯಾಸವಾಗುತ್ತದೆ.

“ಯಾಕೆ ನೀವೂ ಕರ್ನಾಟಕಕ್ಕೆ........”

“ಹೌದು ಗುರುವೆ, ಕಲ್ಯಾಣಕ್ಕೆ ಹೋಗುವ ಬಯಕೆ ಬಲವಾಗಿದೆ.”

“ಸತ್ಯಾನ್ವೇಷಣೆಯ ಹಂಬಲವುಳ್ಳವರೆಲ್ಲ ಕಲ್ಯಾಣಕ್ಕೆ ಧಾವಿಸುತ್ತಿದ್ದಾರೆ. ನಿನಗೂ ಆ ಹಂಬಲವಿದೆ. ಆ ಅಂಕಾಕ್ಷೆಯಾದುದು ಸಹಜವಿದೆ.”

“ನನಗೂ ಆ ಆಶೆ ಗುರುದೇವಾ” ಗಂಗಾದೇವಿ ಎಂದಳು.

“ನಿಜವೇ ತಾಯೀ ? ನೀವಿಬ್ಬರೂ ಸತ್ಯದ ಬೆಳಕು ಕಾಣುವಲ್ಲಿ ಸಂದೇಹವಿಲ್ಲ. ಇದು........ಇನ್ನೊಂದು ಮಾತು ನೆನಪಾಯಿತು. ಕಲ್ಯಾಣದ ಕಡೆಗೆ ಪ್ರಯಾಣಹೊರಟ ‘ಜೊಂತಾದೇವಿ’ ಎಂಬ ವೀರ ವಿರಾಗಿಣಿ ಕಾಶ್ಮೀರದಲ್ಲಿಯ ಒಬ್ಬ ರಾಜಪುತ್ರಿಯೆಂದುಕೇಳಿದೆನು. ಆಕೆಯ ಮೊದಲಿನ ಹೆಸರು ನಿಜದೇವಿಯಂತೆ! ಆತ್ಮನಿಗೆ ತೀರ ಹತ್ತಿರ ಅಂಟಿದ ದೇಹಾಭಿಮಾನವನ್ನೂ ಆ ಮಹಾತ್ಮಳು ತೊರೆದವಳಂತೆ! ಆ ಮಹಾತಾಯಿ ತಮ್ಮ........”

“ನಮ್ಮ ನೆರೆಯ ಸಿಂಧುಕೊಳ್ಳದ ಅರಸುಮಗಳು. ಬಾಲ್ಯದಲ್ಲಿಯೇ ದೈವಭಕ್ತಿಗೊಲಿದು ಸರ್ವಪ್ರಪಂಚದಲ್ಲಿಯೂ ಅಸಾರತೆಯನ್ನೇ ಕಂಡು ಮದುವೆಯನ್ನು ನಿರಾಕರಿಸಿದಳು. ಕ್ರಮೇಣ ಬಲಿತು ಧೃಢಗೊಂಡ ವೈರಾಗ್ಯದಿಂದ ಮನೆಬಿಟ್ಟು ಹೊರಟು ಹೋದಳು. ಈಗ ಕಲ್ಯಾಣಕ್ಕೆ ಹೋಗಿರಬಹುದು. ಗುರುವೇ ಬಸವಣ್ಣನವರದು ಅದೆಂತಹ ಅದ್ಭುತಶಕ್ತಿ ?”

“ಬಸವಣ್ಣನವರ ಸಂಘಟನಾಶಕ್ತಿ ಅಗಾಧವಾದುದು. ಅವರ ಭಕ್ತಿಯಲ್ಲಿಯೇ ಆ ಅದ್ಭುತಶಕ್ತಿಯಿದೆ. ಪರಾತ್ಪರ ವಸ್ತುವಿನಲ್ಲಿ ಶ್ರದ್ಧೆ ವಿಶ್ವಾಸ ಇವು ಅವರಭಕ್ತಿಯ ತಳಹದಿ; ಕಾಯಕಷ್ಟದಿಂದ ದುಡಿದು ಪಡೆದ ಧನದಿಂದ ದಾಸೋಹ ನಡಿಸಿ ಮಿಕ್ಕು ಪ್ರಸಾದಭೋಗಿಯಾಗಿರಬೇಕೆಂಬ ಅವರ ಸಿದ್ಧಾಂತ. ಬಹಿರಂಗದಲ್ಲಿ ಆರ್ಥಿಕಸ್ವಾತಂತ್ರ್ಯವನ್ನು ಒದಗಿಸುವದಲ್ಲದೆ ಅಂತರಂಗದ ಕಾಳಿಕೆಯಾಗಿರುವ ಅಹಂಕಾರವನ್ನು ಕಳೆದು ಹೃದಯವನ್ನು ಹಸನಾಗಿಸುವದು”

“ಬಹುದೊಡ್ಡ ಮಾತು ಗುರುದೇವಾ ಇದು ! ಪರರ ಶೋಷಣೆ ಮಾಡಿ-ಪರಮೇಶ್ವರನನೊಲಿಸ ಹೋದರೆ ಯಾವ ಫಲದೊರೆತೀತು ?”

“ಇಮ್ಮೈಯಲ್ಲಿಯೂ ದುಷ್ಫಲ, ಮತ್ತಿನ್ನೇನು? ಅದರಂತೆ ನಾನುಮಾಡಿದೆನೆನ್ನುವ ಪ್ರತಿಷ್ಠೆಗಾಗಿ ಮಾಡುವ ಭಕ್ತಿಯೂ ದಾಸೋಹವೂ ಯಾತಕ್ಕೂ

ಬಾರವು. ಬಸವಣ್ಣನವರೂ ಅವರ ಸರ್ವಸ್ವವೂ ಶಿವಾರ್ಪಿತವಾಗಿವೆ. ಅವರ ಜೀವನ ನಡೆನುಡಿಯು ಸಾಮರಸ್ಯದ ಸತ್ಯಸೂತ್ರ! ಅವರು ಕೆಲವರ ಸೊತ್ತಾಗಿರುವ ಧಾರ್ಮಿಕ ತತ್ವಗಳನ್ನು ಪರಿಶೀಲಿಸಿ, ಸರ್ವರಿಗೂ-ಸ್ತ್ರೀಯರಿಗೂ—ಪುರುಷರಿಗೂ ಸಾಧ್ಯವಾಗುವಂತೆ ರೂಪಿಸುವ ಸಂಕಲ್ಪ ಹೊಂದಿದ್ದಾರೆ. ಮಾನವರಲ್ಲಿ ಸಮತೆ, ಸಹೋದರತ್ವ, ಸ್ವಾತಂತ್ರ್ಯಗಳನ್ನು ಪ್ರಸ್ಥಾಪಿಸುವ ಬಯಕೆ ಅವರದು! ಜೀವನದ ಸರ್ವಸಮಸ್ಯೆಗಳಿಗೂ ಪರಿಹಾರ ಒದಗಿಸಬಲ್ಲ ಈ ಮಹೋನ್ನತ ವಿಚಾರಗಳುಳ್ಳ ವಿಶಾಲ ಧರ್ಮತತ್ವಗಳ ಪ್ರಸ್ಥಾಪನೆ ಯಾರ ಕುತೂಹಲವನ್ನು ಕೆರಳಿಸಲಿಕ್ಕಿಲ್ಲ? ಆಧ್ಯಾತ್ಮಿಕತೃಷೆಯುಳ್ಳ ಮೇಧಾವಿಗಳು ಉನ್ನತವಿಚಾರದವರು ಎಲ್ಲರೂ ಕಲ್ಯಾಣಕ್ಕೆ ಧಾವಿಸುತ್ತಿದ್ದಾರೆ. ಮತಾಚಾರದ ಒಂದೊಂದು ಮಾತನ್ನೂ ಚಿಕಿತ್ಸಕ ಬುದ್ಧಿಯಿಂದ ಕಂಡು ಪ್ರಯೋಗಕ್ಕೊಳಪಡಿಸಿ, ಪರೀಕ್ಷಿಸಿ ನಿರ್ಣಯಿಸು ವಕ್ರಮ ಕೈಕೊಂಡಿದ್ದಾರೆ. ಅವರೆಲ್ಲ ಶೈವಕ್ಷೀರದ ಮಂಥನ ನಡಿಸಿದ್ದಾರೆ. ತಿಳಿದುಪ್ಪ ಕಾಣಲಿದ್ದಾರೆ.

ಸಾಧಕ ಜೀವಿಗಳ ಉದ್ಧಾರಕ್ಕಾಗಿ ಅವರವರ ಮಟ್ಟದಂತೆ ತಮ್ಮ ಅನುಭಾವವನ್ನು ವಿನಿಯೋಗಿಸುತ್ತಿರುವ ನಿರಂಜನ ಸದ್ಗುರು ಅಲ್ಲಮಪ್ರಭುದೇವರು ಈಗ ದಕ್ಷಿಣಕ್ಕೆ ಮರಳಿ ಸಂಚರಿಸುತ್ತಿದ್ದಾರೆ. ಅವರು ಶರಣರ ಅನುಭವಗೋಷ್ಠಿಯಲ್ಲಿ ನಿರ್ಣಾಯಕ ಪಾತ್ರ ವಹಿಸಬಹುದು. ದೇಶಸುತ್ತಿ ಮಾಡುವಷ್ಟು ಕಾರ್ಯವನ್ನು ಈ ಒಂದೆಡೆಯಲ್ಲಿ ಸಾಧಿಸಲು ಅದು ಅವರಿಗೆ ಸುಸಂಧಿಯಾದೀತು! ಅಲ್ಲಮ ಗುರುವರರದು ಅಗಾಧ ಅನುಭವ!....ಶಿವ....ನೊಳಕೊಂಡ....ಪರಿಣಾಮಿ.... ಆ—ವ—ರು!"

ಗುರುಸ್ಮರಣೆ ಅರಿವಾಗಿ ಪ್ರಭೆಯಾಗಿ, ಆ ಅನುಭವಾನಂದದಲ್ಲಿ ನಿಷ್ಕಲಂಕದೇವರು ತನ್ಮಯರಾಗುವದನ್ನು ಹಿಂದೆ ನೋಡಿದವರಾದ ರಾಜರಾಣಿಯರು ಕ್ಷಣಹೊತ್ತು ಶಾಂತವಾಗಿ ಕುಳಿತು ನಿರೀಕ್ಷಿದರು ಸ್ವಲ್ಪದರಲ್ಲಿಯೇ ಶಿವಯೋಗಿಗಳು ಪ್ರಕೃತಕ್ಕೆ ಬಂದರು.

"ಬೇಗನೆ ಈ ಪಾದದ ಅನುಗ್ರಹವಾಗಿ ನಾವು ಕಲ್ಯಾಣವನ್ನು ಕಾಣಬೇಕೆಂಬ ಆತುರ ಹೆಚ್ಚುತ್ತಿದೆ ಗುರುದೇವಾ!"

"ಸರಿ ಅದನ್ನು ಕಂಡೆ ನಾನು! ನಿನಗೆ ಈಗಿರುವ ರಾಜಾಧಿಕಾರವನ್ನು ಲೋಕಕಲ್ಯಾಣಕ್ಕಾಗಿ ಉಪಯೋಗಿಸುತ್ತ ಅದರಲ್ಲಿ ಮುಳುಗಿರದೆ

ಲಿಂಗಾಂಗಯೋಗ ಸಾಧನೆಯನ್ನೂ ನಡಿಸುವದು ಸಾಧ್ಯವಿದೆ. ಸತಿಪತಿಗಳಿಬ್ಬರೂ ಶಿವಭಕ್ತರಾಗಿರುವಾಗ ದಾಂಪತ್ಯಜೀವನವು ಶಿವಯೋಗಕ್ಕೆ ಕಾಲ್ತೊಡಕಲ್ಲ; ತುಂಬ ಪ್ರಯೋಜನಕಾರಿ! ಶಿವಜ್ಞಾನವರಿತು ಶಿವಪಥದಲ್ಲಿ ನಡೆಯುವ ಬಂಧುಬಳಗವೆಲ್ಲ ಶರಣರಿಗೆ ಮಾನ್ಯರು. ಅವರನ್ನು ತೊರೆಯುವದು ಅವಶ್ಯವಿಲ್ಲ. ಆದರೆ ........."

ಎನ್ನುತ್ತ ನಿಷ್ಕಳಂಕರು ಮುಂದಿರುವ ಮುಮುಕ್ಷುಗಳ ಮುಖ ನೋಡಿದರು. ರಾಜತ್ವದಲ್ಲಿಯೇ ಉಳಿಯ ಬಹುದೆಂಬ ತಮ್ಮ ಅಭಿಪ್ರಾಯವನ್ನು ಒಪ್ಪದಿರುವ ಅವರ ತೀಕ್ಷ್ಣ ವೈರಾಗ್ಯದ ಅವರ ಮುಖಭಾವವನ್ನು ಅವರು ಗಮನಿಸಿ ಮುಂದೆ ನುಡಿದರುಃ

' ಆದರೆ ನಿಮ್ಮಲ್ಲಿ ಉನ್ನತಾದರ್ಶದ ಆತುರ ಸ್ಫುರಿಸುತ್ತಿದ್ದುದನ್ನು ತಡೆಯಲಿಕ್ಕಾಗದು. ಪ್ರಬಲ ಆತುರವು ಪ್ರತಿಭೆಯ ಮುಂಗುರುತು, ಬೇಗನೆ ನಿಮಗೆ ಇಷ್ಟಲಿಂಗ ಧಾರಣಮಾಡಿ, ಅದರ ಸ್ವರೂಪವನ್ನು ಅದರ ಉಪಾಸನೆಯಿಂದ ಪ್ರಾಣಲಿಂಗ-ಭಾವಲಿಂಗಗಳ ಅನುಸಂಧಾನ ಮಾಡುವದನ್ನು ಸಕೀಲಗಳ ಮರ್ಮವನ್ನು ಅಷ್ಟಾವರಣಗಳ ವಿಚಾರವನ್ನು ತಿಳಿಸುವೆ. ಅದೆಲ್ಲ ನಿಮ್ಮ ಮುನ್ನಡೆಯಕ್ರಿಯೆಗೆ ಸಹಾಯಕವಾಗುವದು."

"ನಾವು ಧನ್ಯರು."

"ಸತಿಪತಿಗಳು ಕುಳಿತಲ್ಲಿಯೇ ತಲೆಬಾಗಿಸಿ ಕೈ ಮುಗಿದರು. ಮತ್ತೆ ಕಣ್ಣರಳಿಸಿ ದೂರ ನೋಡಿ ಹರ್ಷಚಿತ್ತರಾಗಿ ನುಡಿದರು ನಿಷ್ಕಳಂಕದೇವರು:

' ನೋಡಿದಿರಾ, ಈ ನಿಸರ್ಗದ ಸೊಬಗು, ಸೌಂದರ್ಯದ ಸಿರಿ! ಈ ಸೌಧಾನದಿಯ ಮಡಲಿನಿಂದ ಅಲ್ಲಿ ದೂರದ ಹಿಮಾಚ್ಛಾದಿತ ಶಿಖರದವರೆಗೆ ಶಿವನ ಸಾಕಾರ ಸ್ವರೂಪ! ಲೀಲಾಮೂರ್ತಿ ನರ್ತಿಸಿ ನಲಿದಾಡುವಂತಿದೆ! ಅರಳಲಿರುವ ಮೊಗ್ಗೆಗೆ ಸುಳಿಗಾಳಿಯ ಸೋಂಕು ಸಹಾಯವಾಗುವಂತೆ ಆತ್ಮವಿಕಾಸಕ್ಕೆ ಆಣಿಯಾಗುತ್ತಿರುವಾಗ, ಈ ಬಯಲಸಿರಿ, ಗಾರೆಯ ಮಂದಿರಗಳಿಗಿಂತ ಮಂಗಲಕರವಾಗುವದಲ್ಲವೇ ರಾಜಾ? ದೀಕ್ಷಾವಿಧಿಯನ್ನು ಇಲ್ಲಿ ನೆರವೇರಿಸಲು ಆತಂಕವೇನು?

"ತಮ್ಮ ಅಪ್ಪಣೆ ಹೇಗೋ ಹಾಗೆ ಆಗಲಿ!"

"ಒಳ್ಳೆಯದು. ಕಾರ್ಯಕ್ರಮವನ್ನು ನಾಳೆ ಗೊತ್ತುಮಾಡೋಣ" ಆಶೀರ್ವದಿಸಿ ಅಪ್ಪಣೆಯಿತ್ತರು ಗುರುದೇವರು.

× × × ×

ಮತ್ತೆ ಮರುದಿನ ನಿಷ್ಕಲಂಕದೇವರು ದೀಕ್ಷಾ ಕಾರ್ಯಕ್ರಮಗೊತ್ತು ಮಾಡಿ ಸೂಚಿಸಿದರು. ಅದರಂತೆ ಯುವರಾಜ ಲಿಂಗಾರತಿಯ ನೇತೃತ್ವದಲ್ಲಿ ಅರಮನೆಯಿಂದ ವಿಪುಲ ಸಾಮಗ್ರಿ ಸರಂಜಾಮು ಬಂದು ಬಿಟ್ಟಿತು. ತಪ್ಪಲಿನ ಬಯಲಲ್ಲಿ ಹಸಿರು ಹಂದರ ಸಿದ್ಧವಾಯಿತು. ಒಳಗಡೆ ರಚಿಸಿದ ಮಂಗಲಕರವಾದ ಮಂಟಪದ ವೇದಿಕೆಯ ಮೇಲೆ ಶ್ರೀಗುರು ನಿಷ್ಕಲಂಕ ಮಲ್ಲಿಕಾರ್ಜುನರು ಮಹಾದೇವ ಗಂಗಾಂಬೆಯರಿಗೆ ಲಿಂಗಧಾರಣದೀಕ್ಷೆಯನ್ನಿತ್ತು ಅನುಗ್ರಹಿಸಿದರು.

ಮುಂದೆ ನಾಲ್ಕು ದಿನವೂ ಆ ಶಿಷ್ಯೋತ್ತಮರಿಗೆ ಇಷ್ಟಲಿಂಗೋಪಾಸನೆಯಿಂದ ಸ್ವಸ್ವರೂಪ ಸಾಕ್ಷಾತ್ಕಾರದ ವರೆಗಿನ ಸಾಧನೆಯ ಕ್ರಮಗಳನ್ನು ವಿವರಿಸಿದರು. ತಮ್ಮ ಗುರುಗಳ ಉಪದೇಶದಲ್ಲಿಯ ಒಂದು ಮಾತು ಹೇಳಿದರು.

“ಪ್ರಾಣಲಿಂಗದ ಪ್ರಸನ್ನ ಮುಖವ ಪರಿಣಾಮಿಸಲೋಸುಗ
ಕರತೇಜವೆಂಬ ದರ್ಪಣವ ಹಿಡಿದಿಪ್ಪನು ನೋಡಾ!
ಗುಹೇಶ್ವರ ಲಿಂಗದಲ್ಲಿ ನಿಜವನ್ನೈದಿಹೆನೆಂದರೆ
ಕುರುಹು ಹಿಡಿದು ಕುರುಹ ಕೆಡಬೇಕು........”

‘ಪ್ರಾಣಲಿಂಗದ ಪ್ರಸನ್ನ ಮುಖವೆಂದರೆ ಸ್ವ-ರೂಪದ ಸಾಕ್ಷಾತ್ಕಾರ. ಅವನ್ನು ಕಾಣುವದಕ್ಕೆ ಕರದಲ್ಲಿ ಬೆಳಗಿದ ಇಷ್ಟಲಿಂಗವೆಂಬ ಕನ್ನಡಿಯಲ್ಲಿ ನೋಡಬೇಕು. ಅದು ಅರಿವಿನ ಕುರುಹು. ಕುರುಹು ಹಿಡಿದು ಅರಿವ ಕಂಡು ಕುರುಹ ಕೆಡಬೇಕು.’

ಅಲ್ಲಿ ಐದು ದಿನ ಗಣಪರ್ವ ನಡೆಯಿತ್ತು. ಅರಮನೆಯಿಂದ ಬಂದ ಸಾಮಾನು-ಸಾಮಗ್ರಿ ಅರಮನೆಗೆ ಹೋಗದೆ ಅಲ್ಲಿಯೇ ದಾನವಾಗಿ ಹೋದವು. ಪ್ರಜಾಪಾಲನೆಯ ಹೊಣೆಯನ್ನು ವಿಧ್ಯುಕ್ತವಾಗಿ ಕೆಳಗಿಡಬೇಕೆಂಬ ಗುರುಗಳ ಅಗ್ರಹದ ಆದೇಶದಿಂದ ರಾಜರಾಣಿಯರು ಅರಮನೆಗೆ ಮರಳಿದರು.

ಶಿವಕಾರುಣ್ಯವು ಸಾಕಾರಗೊಂಡಾಗ ಗುರುರೂಪವಾಗುತ್ತದೆ. ಅದರ ಕ್ರಿಯಾರೂಪವೇ ಇಷ್ಟಲಿಂಗವಾಗುತ್ತದೆ. ಆದ್ದರಿಂದ ಗುರುಲಿಂಗಗಳಲ್ಲಿ ಭೇದವೇ ಇಲ್ಲ. ಮಹಾದೇವನು ತನ್ನ ಉಪಾಸನಾಲಿಂಗವನ್ನು ನಿಷ್ಕಲಂಕ ಮಲ್ಲಿಕಾರ್ಜುನ ಎಂದು ಗುರುವಿನ ಹೆಸರಿನಲ್ಲಿಯೇ ಅರ್ಚಿಸುತ್ತಿದ್ದನು. ವಚನಗಳಿಗೆ ಅದನ್ನೇ ಮುದ್ರಿಕೆಯಾಗಿ ಸ್ವೀಕರಿಸಿದ್ದನು.

## ೬. ಕೊಡಲಿಯು ಕಾಯಕ ಕೈಸೇರಿತು

" ಜಯವಾಗಲಿ ದೊರೆಗಳಿಗೆ "

" ಬನ್ನಿ ಮಂತ್ರಿಗಳೇ ಕುಳಿತುಕೊಳ್ಳಿರಿ, ನಾವು ದೊರೆಗಳಲ್ಲ. " ಉದಾಸಭಾವದಿಂದ ದಿಂಬಿಗೊರಗಿದ್ದ ಯುವರಾಜ ಲಿಂಗಾರತಿ ಮಂತ್ರಿಯನ್ನು ಸ್ವಾಗತಿಸಿದನು.

" ಅದೇಕಲ್ಲ ? ಇದುವರೆಗೆ ಚಿಕ್ಕದೊರೆಗಳು; ಇನ್ನು ದೊರೆಗಳು " ಎನ್ನುತ್ತ ಮಂತ್ರಿ ರತ್ನಪಾಲನು ಎದುರುಗಡೆ ಕುಳಿತುಕೊಂಡನು.

" ಹೂಂ....ಮುಂದೇನೋ–ಏನೋ .... ನನಗೇನೂ ತಿಳಿಯದಾಗಿದೆ. ತಂದೆಯವರ ದೈವಭಕ್ತಿ ಇಷ್ಟು ಉಜ್ವಲವಾಗಿ ಈ ಹಂತಕ್ಕೆ ಬಂದೀತೆಂದು ಅನಿಸಿರಲಿಲ್ಲ. "

" ಭಕ್ತಿ ವೈರಾಗ್ಯದ ಕಡೆಗೆ ಒಲಿದಿದೆ. ಅವರ ಕರಣ–ವೃತ್ತಿಗಳು ವೈರಾಗ್ಯದತ್ತ ವೇಗದಿಂದ ಓಡುತ್ತಿವೆ. ಸೌಧಾತೀರದ ಆಶ್ರಮದಲ್ಲಿ ಲಿಂಗದೀಕ್ಷೆ ಹೊಂದಿದ ಬಳಿಕ ಆರಂಭವಾದ ದಾನಸತ್ರ ಇನ್ನೂ ನಡೆದೇ ಇದೆ. ಬೇಡಿದವರಿಗೆ ಬೇಡಿದ್ದನ್ನು ಕೊಡುತ್ತಲಿದ್ದಾರೆ. "

" ಅದೇನಾದರಾಗಲಿ, ಅಂದು ಅರಮನೆಗೆ ಮರುಳುವದನ್ನೇ ನಿರಾಕರಿಸಿ ಬಿಟ್ಟಿದ್ದರು. 'ಸದ್ಯ ಮರ್ಗದ ರಾಜ್ಯಭಾರವು ಸಮಾಜಸೇವೆಯ ಒಂದು ಕಾಯಕವೇ ಆಗಿದೆ. ಅದನ್ನು ತ್ಯಜಿಸುವದಾದರೆ ಪುನರ್ವ್ಯವಸ್ಥೆ ಮಾಡಬೇಕು. ಹಾಗೆಯೇ ಬಿಟ್ಟು ಅಸ್ತವ್ಯಸ್ತಗೊಳಿಸುವದು ಉಚಿತವಲ್ಲ' ಎಂದು ನಿಷ್ಕಳಂಕದೇವರು ಹೇಳಿ ಒಡಂಬಡಿಸಿ ಕಳಿಸಿದ್ದಾರೆ. "

" ಸರಿ. ಇಂದು ಪುನರ್ವ್ಯವಸ್ಥೆಯ ವಿಚಾರವನ್ನೇ ನಡಿಸಿದ್ದಾರೆ. ಬೆಳಗಿನಲ್ಲಿ ನನ್ನನ್ನು ಬರಮಾಡಿಕೊಂಡು ಕೇಳಿದರು : 'ಪ್ರಾಪಂಚಿಕವಾಗಿ ನನ್ನದೆನ್ನುವದನ್ನು ನಾನು ದಾನ ಮಾಡಬಹುದು. ಈ ಅರಮನೆ, ಈ ವಸ್ತು ವೈಭವಗಳಿಗೆಲ್ಲ ವ್ಯಾವಹಾರಿಕ ಕಟ್ಟಳೆಯಂತೆ ನಾನು ಒಡೆಯನಾಗಿದ್ದೇನೆಯೇ ರತ್ನ

ಪಾಲ ? ನನಗೆ ಸಂಶಯು ಬರುತ್ತಿದೆ.' ಎನಲು ನಾನು 'ಈ ಒಡೆತನದಲ್ಲಿ ಯುವರಾಜ ಲಿಂಗಾರತಿಯುವದು ಪಾಲುಗಾರರು; ಇದನ್ನು ತಾವು ಅರಿತವರೇ ಇದ್ದೀರಿ.' ಎಂದೆನು, 'ಸರಿ, ಅರಿತವನೇ ಆದರೂ ಅನುಸರಿಸದೆ ಹೋಗಿದ್ದೇನೆ. ಇದೆಲ್ಲವೂ ಶಿವನ ಸೊತ್ತಾದರೂ ಇದರರ್ಥವನ್ನು ತಾನು ತಾಳಿದ ಭಾವನೆ ಯಂತೆ ಭೋಗಿಸುವದಕ್ಕೂ ದಾನಮಾಡುವದಕ್ಕೂ ಧರಿಸುವದಕ್ಕೂ ತ್ಯಜಿಸು ವದಕ್ಕೂ ಲಿಂಗಾರತಿಯು ಹಕ್ಕುದಾರನು' ಎಂದು ನುಡಿದು ಅದರಾಲೋಚನೆಗೆ ಸಂಜೆ ಮತ್ತೆ ಬರಲು ತಿಳಿಸಿದ್ದಾರೆ. ರಾಜಾಧಿಕಾರವನ್ನು ನಿಮಗೆ ವಹಿಸಿಕೊ ಡಲು ತವಕಗೊಂಡಿದ್ದಾರೆ. "

" ಆದರೆ ನಾನದನ್ನು ಬಯುಸಿದವನಲ್ಲ. ತಂದೆತಾಯಿಗಳ ಸೇವೆ ನನಗೆ ಶ್ರೇಯಸ್ಕರ ! ಪದೇಪದೇ ಬರುವ ಅವರ ದೇಶಾಂತರದ ಮಾತು ನನಗೆ ಧೃತಿಗೆ ಡಿಸಿದೆ, ನಾನೂ ದೇಶಾಂತರ ಮಾಡಲೇ ಎನಿಸಿದೆ. "

" ಒಳ್ಳೆಯದಾಯಿತಲ್ಲ, ನೀವು ಹಾಗೆಂದರೆ ರಾಜ್ಯದ ಗತಿಯೇನು? ದುರ್ಗಮವಾದ ನಿಸರ್ಗದ ಆಶ್ರಯದಲ್ಲಿ ಕಾಶ್ಮೀರ ಕೊಳ್ಳದಲ್ಲಿಯ ನಾಲ್ಕು ಅರ ಸೊತ್ತಿಗೆಗಳು ಒಂದು ಸಂಘಟನೆಯಿಂದ ಮ್ಲೇಂಛರ ದಾಳಿಗಳನ್ನು ತಡೆದು, ಪ್ರಜೆ ಗಳು ಪ್ರಕೃತಿಯ ಸಂಪತ್ತಿನೊಡನೆ ಸುಖವಾಗಿರುವಂತೆ ಮಾಡಿವೆ. ಅವುಗಳಲ್ಲಿ ನಮ್ಮ ಸಪಾದಲಕ್ಷವು ಪ್ರಮುಖವಾದ ರಾಜ್ಯವು ! ಇದನ್ನೇ ಅನಾಯಕಗೊಳಿ ಸಿದರೆ, ಆ ಪ್ರಜೆಗಳು ಇಂದು ಅನಾಥರಾಗಬೇಕಾಗುವದು. ಹಿರಿಯ ದೊರೆಗಳು ಎಲ್ಲರಿಗೂ ಮಾನ್ಯರು! ಅವರ ಸೇವೆಯಿಂದ ನಾವೂ ಪುನೀತರಾಗಬೇಕು. ಆದರೆ ಅವರಿಗೆ ಪ್ರತಿಮಾತಾಡಲು ನಮಗೆ ಶಕ್ತಿ ಸಾಲದು. ಇನ್ನು ನಮ್ಮೆ ಲ್ಲರ ಜೀವನವು ಒಂದು ಉದ್ದೇಶವನ್ನು ಹೊಂದಿ ಮುಂದುವರಿಯುತ್ತಿದೆ. ಕರ್ತವ್ಯವೆಂಬುದು ಅದಕ್ಕೆ ಆಶ್ರಯಸ್ಥಾನವಾಗಿರುವದು. ತಾವು ಕರ್ತವ್ಯವನ್ನು ಲಕ್ಷಕ್ಕೆ ತಂದುಕೊಳ್ಳಬೇಕು. ಅದರಿಂದಲೇ ಪೂಜ್ಯರಾದ ಹಿರಿಯ ಆತ್ಮರಿಗೂ ಆನಂದವಾಗುವದು ಸಾಧ್ಯ! "

ಬೆರಗುವಡೆದು ಕುಳಿತಿದ್ದ ಲಿಂಗಾರತಿ ಮಾತನಾಡದೆ ಮಂತ್ರಿಯ ಮುಖನೋಡಿದನು. ಅಷ್ಟರೊಳಗೆ ಬಾಗಿಲಲ್ಲಿ ದಾಸಿಯನ್ನು ಕಂಡ ರತ್ನ ಪಾಲನು ಎದ್ದು ನಿಂತು ' ಭೋಜನದ ಕರೆ ಬಂದಿದೆ, ಏಳಿರಿ ' ಎನ್ನುತ್ತ ಕೈಮುಗಿದು ಬೀಳ್ಕೊಂಡನು.

ಬಾಗಿಲ ಮರೆಯಲ್ಲಿ ನಿಂತ ದಾಸಿ ಸ್ವಲ್ಪ ಮುಖ ಮುಂದೆಮಾಡಿ ಮೆಲ್ಲಗೆ ಹೇಳಿದಳು: "ಸ್ನಾನಕ್ಕೆ ಸಿದ್ಧತೆಯಾಗಿದೆ, ಯುವರಾಜರು ದಯ ಮಾಡಿಸಬೇಕಂತೆ"

"ಯಾರು ಕರೆದಿದ್ದಾರೆ?"

"ಯುವರಾಜ್ಞಿಯವರು"

"ಮಾತಾಜಿ ಎಲ್ಲಿದ್ದಾರೆ"

"ಅವರು ಹಿಂದಿನ ಹೆಬ್ಬಾಗಿಲ ಹತ್ತಿರದ ಕೋಣೆಯಲ್ಲಿ ತಮ್ಮ ಅಡಿಗೆ ಮಾಡಿಕೊಳ್ಳುತ್ತಿದ್ದಾರೆ."

"ತಮ್ಮಷ್ಟಕ್ಕೆ ಬೇರೆಯಾಗಿಯೇ? ಏಕೆ?"

"ಪ್ರಭುಗಳು ಮಹಾರಾಣಿಯವರು ಉಣ್ಣುವದು ಮಸಾಲೆಗಳಿಲ್ಲದ ಸಾದಾ ಪಾಕವಂತೆ!"

"ಅದನ್ನು ಸ್ವತಃ ಮಾಡುತ್ತಿರುವದೇಕೆ?"

"ನನಗೆ ತಿಳಿಯದು ಧನಿಯರೆ, ಮುಂಜಾನೆ ಆ ಕೋಣೆಯ ಸಾರಣೆ ಸ್ವತಃಮಾಡಿ ಮಹಾರಾಣಿಯವರು ಅಡಿಗೆ ಹೂಡಿದ್ದಾರೆ. ಅಲ್ಲಿ ಪಾತ್ರೆ ತೊಳೆಯುವ, ನೀರಿಡುವ, ಒಲೆ ಹೊತ್ತಿಸುವ ಕೆಲಸಗಳಿಗೆ ನಾವು ಮುಂದಾದರೆ ನಮಗೆ ಆಸ್ಪದ ಕೊಡಲಿಲ್ಲ. ಅದನ್ನು ತಿಳಿದು ಯುವರಾಜ್ಞಿಯವರು ತಾವೇ ಹೋಗಿ ಅವರ ಕೈಯ ಕೆಲಸ ನಿರ್ವಹಿಸ ತೊಡಗಿದರೆ 'ಈ ಕಾಯ ದುಡಿಯಬೇಕಾದುದು ಧರ್ಮ ತಾಯಿ! ಈ ಕೆಲಸ ನನಗಿರಲಿ, ನೀನು ಬೇಡ ಬಿಡು' ಎಂದು ಆಗ್ರಹದಿಂದ ಹಿಂದಕ್ಕೆ ಕಳಿಸಿದ್ದಾರೆ."

"ಪಿತಾಜಿ ಎಲ್ಲಿ? ನೋಡಿ ಬಾ."

"ಸ್ವಲ್ಪ ಹೊತ್ತಿಗೆ ಮೊದಲು ಪ್ರಭುಗಳು ಹಿಂದಿನ ಬಾಗಿಲಿನ ಹೊರಗೆ ಹೋಗಿ ಅತ್ತಿತ್ತ ನೋಡಿ ಒಂದು ಕೊಡಲಿಯನ್ನು ಕೈಕೊಂಡು ಉಪವನ ದಾಟಿ ಕಾಡು ಹೊಕ್ಕರು. ಅದನ್ನು ನಾವೆಲ್ಲ ನೋಡಿದೆವು. ಮಹಾರಾಣಿಯವರಿಗೆ ಮೊದಲೇ ಗೊತ್ತಿತ್ತೇನೋ ಅವರು ಮಿಟುಕಲೇ ಇಲ್ಲ........"

ಲಿಂಗಾರತಿ ಮತ್ತಷ್ಟು ಬೆರಗುಬಡೆದು ದಿಗ್ಗನೆ ಎದ್ದು ಕೋಣೆಯಿಂದ ಹೊರ ಬಂದು ಅರಮನೆಯಲ್ಲಿ ಅಲ್ಲಲ್ಲಿ ಇದ್ದವರು ನೋಡುತ್ತಿದ್ದಂತೆ ಧಾವಿಸಿ ಹಿಂದಿನ ಬಾಗಿಲಿನಿಂದ ಹೊರಟು ರಾಜವನವನ್ನು ದಾಟಿ ಅರಣ್ಯವನ್ನು ಹೊಕ್ಕನು.

ಮಂತ್ರಾಲೋಚನೆಯಾದ ಬಳಿಕ ಮಹಾದೇವರಾಜನು, ಸ್ವಯಂಪಾಕದಲ್ಲಿ ತೊಡಗಿರುವ ಗಂಗಾದೇವಿಯ ಹತ್ತಿರ ಬಂದು ನಿಂತುನೋಡಿ ಮನ ವರಳಿ ನುಡಿದನು:

“ದೇವೀ ನಾನೇನು ಮಾಡಲಿ? ನನಗಾವ ಕಾಯಕ? ಕಾಯಕ ವಿಲ್ಲದೆ ಪ್ರಸಾದಸಿದ್ಧಿ ಹೇಗೆ? ನೀನೊಂದು ಕೈಕೊಂಡೆ; ಸರಿಯಾಯ್ತು. ನಾನು ಏನು ಮಾಡಲಿ? ಕಾಯಕಷ್ಟಪಡಲೇಬೇಕು.”

ಗಂಗಾದೇವಿ ಗಂಡನ ಮುಖ ನೋಡಿದಳು ಮಾತ್ರ! ಏನನ್ನೂ ಹೇಳಲಿಲ್ಲ. ಮೌನವೇ ಉತ್ತರವಾಗಿತ್ತು. ‘ಅಂತರಾತ್ಮನ ಆದೇಶದಂತೆ ಮಾಡಿರಿ’ ಎಂದು ಹೇಳಿದಂತಿತ್ತು ಆ ಉತ್ತರ.

‘ಒಳ್ಳೆಯದು ಯಾವುದನ್ನು ಎಟುಕಿಸುತ್ತಾನೋ ನೋಡುವಾ ಶಿವನು.’ ಎನ್ನುತ್ತ ಮಹಾದೇವನು ಆ ಹಿಂದಿನ ಹೆಬ್ಬಾಗಿಲಿಗೆ ಬಂದು ಟೊಂಕದಲ್ಲಿ ಕೈಯಿಟ್ಟು ನಿಂತು, ದೃಷ್ಟಿ ಹರಿದಷ್ಟೂ ದೂರ ನೋಡಿದನು. ಮುಂದೆಯೇ ಕೆಳಗಡೆ ಇರುವ ರಾಜವನವನ್ನು ದಾಟಿತ್ತು ಆ ದೃಷ್ಟಿ! ಅಲ್ಲಿ ಅರಮನೆಯ ಹಿಮ್ಮಗ್ಗಲಿನ ಕಾಡು! ಹಸಿರು ಮರಗಳ ನಡುವೆ ಎತ್ತರವಾಗಿ ಒಣಗಿನಿಂತ ಇಲ್ಲವೆ ಉರುಳಿದ ಮರಗಳನ್ನು ಕಾಯಕ ಹುಡುಕುವ ಕಣ್ಣು ಕಂಡು ಬಿಟ್ಟವು. ಅಲ್ಲಿಂದ ಮರಳಿದ ಕಣ್ಣುಗಳು ಅತ್ತಿತ್ತ ನೋಡುತ್ತಿರುವಾಗ ಮುಂದಿನಂಗಳದ ಛಪ್ಪರದಲ್ಲಿ ಅರಮನೆಯ ಸೇವಕರು ಹಾಕಿದ ಸೌದೆ ರಾಶಿಯೂ ಹತ್ತಿರಿಟ್ಟ ಒಂದು ಕೊಡಲಿಯೂ ಕಂಡವು. ಹೊರಗಣ್ಣು ಕಂಡುದನ್ನು ಒಳಗಣ್ಣು ನೋಡಿ ಒಪ್ಪಿತು. ಅಂತರಾತ್ಮನ ಆದೇಶವಾಯಿತು. ಕಾಯಕ ನಿರ್ದಿಷ್ಟಪಟ್ಟಿತು. ಅನ್ಯ ವಿಚಾರಕ್ಕೆ ಆಸ್ಪದವೇ ಇಲ್ಲ; ಅಗತ್ಯವೂ ಇಲ್ಲ. ಉಲ್ಲಸಿತ ಮಾನಸನಾಗಿ ಮಹಾದೇವನು ಬಾಗಿಲು ಮೆಟ್ಟಲಿಳಿದು ಕೊಡಲಿಯನ್ನು ಹೆಗಲಿಗೇರಿಸಿಕೊಂಡು ಹೋಗಿಬಿಟ್ಟಿದ್ದನು. ಒಂದು ಗಳಿಗೆಯ ಮೇಲೆ ಲಿಂಗಾರತಿ ಹೋದುದು.

ತಂದೆಯನ್ನು ಹುಡುಕಿ ಕಾಣಲು ಮತ್ತೊಂದು ಗಳಿಗೆಯಾಯಿತು. ಆಗ ಮಹಾದೇವನು ಕಡಿದ ಕಟ್ಟಿಗೆ ಕೂಡಿಸಿ ಬಳ್ಳಿಯ ಕಾಂಡಗಳಿಂದ ಕಟ್ಟಿ ಹೊರೆ ಮಾಡುತ್ತಿದ್ದನು. ಲಿಂಗಾರತಿ ಬಂದು ಕಾಲಿಗೆರಗಿದನು.

“ನೀನೇಕೆ ಬಂದೆ ಲಿಂಗಾರತಿ?” ಎಬ್ಬಿಸಿ ಕೇಳಿದನು.

“ನಾನಿದನ್ನು ನೋಡಲಾರೆ ಪಿತಾಜಿ.” ಲಿಂಗಾರತಿಯ ಕಣ್ಣೀರು ಕಪೋಲಕ್ಕೆ ಬಂದಿದ್ದವು.

“ನೋಡಬೇಕು; ನೋಡುವವರಲ್ಲಿಯೇ ನಿನ್ನ ಎದೆಗಾರಿಕೆಯಿದೆ. ನಾಚಿಕೆ ಪಡುವಂಥದಿದೆಯೇ- ಕ್ರೌರ್ಯವಿದೆಯೇ ಇದರಲ್ಲಿ? ತ್ರಿಕರಣವೂ ಶಿವಾರ್ಪಿತ

ವಾಗುತ್ತಿರುವ ಸಂತೃಪ್ತಿಯಿದೆ; ನಿರ್ಮಲಾನಂದವಿದೆ; ದುರಹಂಕಾರದ ದಮನವಿದೆ. ”

“ ಇರಬಹುದು. ಆದರೆ ಇದುವರೆಗೆ ಕಂಡರಿಯದ ಶ್ರಮವನ್ನು, ಒರಟು ವಸ್ತುಗಳ ಆಘಾತವನ್ನು ಶರೀರ ಹೇಗೆ ಸಹಿಸುವದು? ”

“ ಅಭ್ಯಾಸದಿಂದ ಸಹಿಸುತ್ತದೆ. ಇಂದು ಇಷ್ಟೇ! ನಾಳೆ ಇದಕ್ಕೂ ಹೆಚ್ಚು........”

ಲಿಂಗಾರತಿಯು ಹೊರೆಯನ್ನು ತಾನು ಹೊರಬೇಕೆಂದು ಯತ್ನಿಸಿದನು. ಆದರೆ ಮಹಾದೇವರಾಜ ಅದನ್ನು ತಡೆದು ಹೇಳಿದನು :

“ ಇಂದಿನ ನನ್ನ ಕಾಯಕ ಕಂಡ ಜನಜಂಗುಳಿ ಇದು ಮರುಳತನವೆನ್ನದೆ ಬಿಡದು. ಲೋಕದ ದೃಷ್ಟಿಯಲ್ಲಿ ನಾನು ಮರುಳನಾದರೆ ನನಗೆ ಬಾಧೆಯಿಲ್ಲ. ಅದು ನನಗೆ ಅನುಕೂಲವೇ ಆದೀತು. ಅದೇ, ಜನರ ಕಣ್ಣಲ್ಲಿ ನೀನು ಮರುಳನಾದರೆ, ರಾಜ್ಯವಾಳುವದಕ್ಕೇ ನಿನಗೆ ಆತಂಕ ಬಂದೀತು. ಬೇಡಪ್ಪಾ! ”

ಮಗ ಮುಂದೆ-ಹೊರೆಹೊತ್ತು ತಂದೆ ಹಿಂದೆ – ಬಂದರು. ಯುವರಾಜನ ಭಾಗದ ಊಳಿಗದವರೆಲ್ಲ ಹಿಂದಿನ ಬಾಗಿಲಿಗೆ ಬಂದು ನಿಂತು ನೋಡುತ್ತಿದ್ದರು. ಅವರನ್ನು ಕಂಡು ಮಹಾದೇವ ಮಹಾರಾಯನಿಗೆ ಯಾವ ಸಂಕೋಚವೂ ಉಂಟಾಗಲಿಲ್ಲ. ಸರಾಗವಾಗಿಬಂದು ಸೌದೆಯ ಬಣವೆಗೆಹೊರೆಯಿಟ್ಟು ಪ್ರಸನ್ನವದನನಾಗಿ ಮೆಟ್ಟಿಲು ಹತ್ತಿ ಒಳಗೆ ಬಂದನು.

ಗಂಗಾದೇವಿ ಶಿವಪೂಜೆಗೆ ಸಿದ್ಧತೆಮಾಡಿ, ಸ್ನಾನಕ್ಕೆ ನೀರು ಕಾಯಿಸಿಟ್ಟಿದ್ದಳು. ಮಹಾದೇವನು ಸ್ನಾನಮಾಡಿ ಲಿಂಗಾರ್ಚನೆ- ಜಂಗಮಾರ್ಚನೆಗೈದನು: ಸತಿಪತಿಗಳಿಬ್ಬರು ತೀರ್ಥ-ಪ್ರಸಾದ ಸೇವಿಸಿ ಪ್ರಸನ್ನರಾಗಿ ವಿರಮಿಸಿದರು

ಬೇಗಿನ ಹೊತ್ತಿಗೆ ಅರರಿಬ್ಬರು ಅಮನೆಯಲ್ಲೆಲ್ಲ ಸುತ್ತಾಡಿ ಸಮಗ್ರ ವಸ್ತು-ಒಡವೆ ಧನಕನಕ ಆಭರಣಾದಿಗಳನ್ನೆಲ್ಲ ಪರಿಶೀಲಿಸಿ ಲಿಂಗಾರತಿಗೆ ಇಡಬೇಕಾದವುಗಳನ್ನಿಟ್ಟು, ಹೆಚ್ಚಿನವುಗಳನ್ನು ಈಗ ದಿನನಿತ್ಯ ನಡಿಸುತ್ತಲಿದ್ದ ದಾನಸತ್ರದಲ್ಲಿ ವಿನಿಯೋಗಿಸಲು ಒಂದು ಕಡೆಗೆ ಕೂಡಿಹಾಕಿದರು. ಅಷ್ಟರಲ್ಲಿ ರತ್ನ ಪಾಲನು ಬರಲು ಅವನನ್ನು ಗೌರವಿಸಿ ತಮ್ಮ ಬದಿಯಲ್ಲಿ ಕುಳ್ಳಿರಿಸಿಕೊಂಡು ಅದನ್ನೆಲ್ಲ ತೋರಿಸಿ ವಿವರಿಸಿದರು. ನಿಷ್ಠನಾದ ಮಂತ್ರಿ ಬೇರೆ ಏನನ್ನು ಹೇಳಬಲ್ಲನು ? ಬಳಿಕ ಮಹಾದೇವರಾಜನು ಮೊದಲೇ ಮನಸ್ಸಿನಲ್ಲಿ ಯೋಚಿಸಿ ನಿರ್ಣಯಿಸಿಕೊಂಡಂತೆ ಆದೇಶ ನೀಡಿದನು; ಅದು ಹೀಗೆ:—

“ ಮಂತ್ರಿವರ, ಇಂದು ರಾಜನಾಗಿ ನಿನಗೆ ಕೊನೆಯ ಆದೇಶ ನೀಡುತ್ತಿದ್ದೇನೆ. ಎಂದಿನಂತೆ ಅದನ್ನು ಅನುಷ್ಠಾನಕ್ಕೆ ತಂದು ಸಂತೋಷಪಡಿಸಬೇಕು. ಪಾರಮಾರ್ಥಿಕರಂಗದಲ್ಲಿ ನಿನ್ನಿಂದ ನನಗೆ ಮಹತ್ತರವಾದ ಉಪಕಾರವಾಗುವದು.”

ರತ್ನಪಾಲ ಕೈಮುಗಿದನು. ಕಂಠಬಿಗಿದಿತ್ತು ಮಾತು ಬರಲಿಲ್ಲ; ‘ಆಗಲಿ ಪ್ರಭು’ ಎಂದನು ಮಾತ್ರ.

“ಸೌಧಾತೀರದ ಆಶ್ರಮವನ್ನೊಳಗೊಂಡು ರಾಜ್ಯದಲ್ಲಿಯ ಎಲ್ಲ ಗುಹಾಶ್ರಮಗಳಲ್ಲಿರುವ ಶಿವಯೋಗಿಗಳಿಗೆ, ಯೋಗಸಿದ್ಧರಿಗೆ ಅಲ್ಲಲ್ಲಿ ಅವರವರಿಗೆ ಅನುಕೂಲವಾಗಿರುವ– ಪ್ರತಿ ಆಶ್ರಮಕ್ಕೆ ೨೦ ಮತ್ತರ ಫಲವೃಕ್ಷಪ್ರದೇಶವನ್ನು ದಾನವಾಗಿ ಬಿಡುವ ದಾನಪತ್ರಗಳನ್ನು ಸಿದ್ಧಗೊಳಿಸಿ ಎರಡುದಿನಗಳಲ್ಲಿ ರಾಜಶಾಸನ ಮಾಡಬೇಕು.

ಯುವರಾಜ ಲಿಂಗಾರತಿಗೆ ಸಿಂಹಾಸನವನ್ನು ಒಪ್ಪಿಸಿ ನಾನು ರಾಜ್ಯತ್ಯಾಗಮಾಡುವ ನನ್ನ ನಿರ್ಣಯವನ್ನು ರಾಜ್ಯದಲ್ಲಿ ಡಂಗುರದಿಂದ ಸಾರಬೇಕು. ಸಿಂಹಾಸನಾರೋಹಣವು ವಿಧ್ಯುಕ್ತವಾಗಿ ನಡೆಯುವ ವ್ಯವಸ್ಥೆ ಮಾಡಬೇಕು. ಅದು ಒಂದು ವಾರದಲ್ಲಿ ಆಗಬೇಕು”

“ಆಗಲಿ ಪ್ರಭು”ಎಂದು ಭಾರವಾದ ಮನಸ್ಸಿನಿಂದ ನುಡಿದು ಮಂತ್ರಿ ವಂದಿಸಿ ಹೊರಟುಹೋದನು.

# ೭. ದಾಟಿ ಬಂದಿತು ದೋಣಿ

ಮುಂಜಾವಿನ ವೇಳೆಯಲ್ಲಿ ತಾವೇ ಆಯ್ದು ಕೊಯ್ದು ತಂದ ಹೊಸ ಹೂವಿನ ರಾಶಿಯನ್ನು ನಡುವಿರಿಸಿಕೊಂಡು ಶಿವಭಕ್ತದಂಪತಿಗಳು ಎದುರು ಬದರಾಗಿ ಕುಳಿತಿದ್ದರು. ಬೇರೆ ಯಾರೂ ಇಲ್ಲ. ಪರಿವಾರ ಪರಿಹಾರಗೊಂಡು ಎರಡು ವಾರವಾಗಿತ್ತು. ಗಂಗಾದೇವಿ ಮಾಲೆ ಮಾಡುತ್ತಿದ್ದಳು. ಮಹಾದೇವನು ಬಣ್ಣಬಣ್ಣಗಳ ಯೋಜನೆಯಾಗುವಂತೆ ಒಳ್ಳೆಯ ಹೂವುಗಳನ್ನು ಕ್ರಮವಾಗಿ ಕೈಗೆ ಕೊಡುತ್ತಿದ್ದನು. ನಿತ್ಯದಂತೆ ಲಿಂಗಾರ್ಚನೆಗೆ ಪತ್ರಿಪುಷ್ಪಗಳ ಸನ್ನಾಹ ವಷ್ಟೇ ಅಲ್ಲದೆ ಇಂದು ಗುರುಗಳ ಸ್ವಾಗತಕ್ಕೆ ಸುಂದರವಾದ ಮಾಲೆಯನ್ನು ಕಟ್ಟಬೇಕಾಗಿತ್ತು. ಗಂಗಾದೇವಿಯ ಹಾಲುಬಣ್ಣದ ಹಣೆಯ ಮೇಲೆ ಬೆಳಗು ಮೂಡಿದಂತಿದ್ದ ಭಸ್ಮತ್ರಿಪುಂಡ್ರ! ಹಿಂದೆಂದೂ ಉಡದ ನಾರಸೀರೆ ಇಂದು ಮೈಗೆ ತುಂಬ ಅಳವಟ್ಟಂತೆ ಮನಸ್ಸಿಗೆ ಸೊಗಸಾಗಿತ್ತು. ಮಹಾದೇವನು ಆಕೆಯ ವಿಕಸಿತ ವದನವನ್ನು, ನವವಿಕಸಿತ ಕುಸುಮರಾಶಿಯನ್ನು—ಅತ್ತೊಮ್ಮೆ ಇತ್ತೊಮ್ಮೆ—ಎರಡುಸಲ ನೋಡಿದನು. ಸತಿಯ ಶರೀರದ ಕೋಮಲತೆ, ಅನುರೂಪವಲ್ಲದ ನಾರಸೀರೆಯಲ್ಲಿ ಎದ್ದು ಕಂಡಿತು. ಮೃದುವಾದ ಮೈ ಉರು ಟಾದ ಬಟ್ಟೆಗೆ ಹೊಂದಿಕೊಂಡೀತೇ? ಎಂದು ಸಂದೇಹವಾಯಿತು ಅವ ನಿಗೆ! ಹೊರಬಿದ್ದು ಹೋದ ಹೃದಯದ ಹಳೆಯ ಬಣ್ಣದ ಅವಶೇಷ ಅದು! ಬಿಟ್ಟುಹೋಗುವ ದಾರಿಯಲ್ಲಿ ತುಸು ತೇಲಿಬಂದಿತ್ತು.

"ಗಂಗಾ, ನಾಳಿನ ನೇಸರನುದಯವನ್ನು ಮಾಂಡವ್ಯಪುರದಲ್ಲಿ ನೋಡ ಬಾರದೆಂದು ನಾವಿಬ್ಬರು ನಿರ್ಣಯ ಮಾಡಿದ್ದೇವೆ ನಿಜ! ಆದರೆ....

"ಆದರೆ....ಈ ಅನುಮಾನದ ಅರ್ಥವೇನು ಸ್ವಾಮೀ!"

"ಅರ್ಥವಿಷ್ಟೇ! ನೀನು ಹೆಂಗಸು; ಸುಕುಮಾರ ಶರೀರ ನಿನ್ನದು. ನೂರುಗಾವುದದ ಪ್ರಯಾಣ! ಆದರೂ ನೀನು ಬರಲೇಬೇಕೆಂದಿರು

ವೆಯಾ? ಮಾರ್ಗಾಯಾಸವನ್ನು ನೀನು ಸಹಿಸಲಾರೆ. ರಾಜಮಾತೆಯಾಗಿ ಲಿಂಗಾರತಿಯ ರಕ್ಷಣೆಯಲ್ಲಿ ಯಾಕಿರಬಾರದು? ನಿನ್ನ ಯೋಗಸಾಧನೆಗೂ ಆತಂಕವಾಗಲಾರದು."

"ಏನು ದೇವಾ, ನಾನು ಹೆಂಗಸು, ಹೆಣ್ಣು, ಎಂಬಿರಾ? ನಿಮ್ಮಲ್ಲಿರಿಸಿದ ನನ್ನ ಭಕ್ತಿಸೂತ್ರದಿಂದ ನನ್ನ ಹೆಣ್ತನವು ನಿಮ್ಮ ಪಾದದಲ್ಲಿ ಅಡಗಿಬಿಟ್ಟಿದೆ. ನನಗೆ ಭಿನ್ನತ್ವವಿಲ್ಲ; ಬರುವೆಯಾ? ಬಾರೆಯಾ? ಎಂಬ ಮಾತೇಕೆ ಸ್ವಾಮೀ? ಈ ಅಳುಕು ಭಾವನೆ ಶಿವನಲ್ಲಿಟ್ಟ ಶ್ರದ್ಧೆಗೆ ಕುಂದಲ್ಲವೇ?"

ಮಡದಿಯು ನೀರುತುಂಬಿದ ಕಣ್ಣುಗಳ ಕಾಂತಿಗೆ ಮಹಾದೇವನ ಅರಿವಿನ ಕಣ್ಣಿಗೆ ಮುತ್ತಿದ ಮಂಜು ಹರಿಯಿತು. ಅವನು ಹೊರಗಣ್ಣು ಮುಚ್ಚಿ ಕ್ಷಣಹೊತ್ತು ಕುಳಿತು, ತಲೆಯೆತ್ತಿ ಸಾವಧಾನವಾಗಿ :

"ಹೌದು ದೇವೀ ಹೌದು; ತಪ್ಪಿದೆ, ತಪ್ಪಿ ನುಡಿದೆ ನಾನು! 'ಹೆಣ್ಣು ಗಂಡಿನ ಮರೆಯ ಮಹಾ ಚೈತನ್ಯ ಒಂದೇ' ಎಂಬದನ್ನು ಭಕ್ತಿ ಭಾಷೆಯ ಬೇರೆ ರೂಪದಲ್ಲಿ ಹೇಳಿ ಬೆಳಕ ನೀಡಿದೆ ನೀನು! ನೀನು ನನಗೆ 'ಗಂಗಾ' ಮಾತ್ರ ಅಲ್ಲ; ಬರಿಯ ದೇವಿ ಅಲ್ಲ, 'ಮಹಾದೇವಿ' ಆಗಿರುವೆ."

ಎಂದು ಎದೆದುಂಬಿ ನುಡಿದನು. ಆಗ ಅವರ ಕಣ್ಣುಗಳ ಕೊನೆಯ ಬೆಳಕು ಕುಡಿವರಿದು ನಿಂತಿತ್ತು. ಒಬ್ಬರ ಮುಖವನ್ನೊಬ್ಬರು ನೋಡಿ ಪರಸ್ಪರ ಗುರುಶಿಷ್ಯರಂತೆ ಕೈಮುಗಿದರು. ಸತಿಪತಿಗಳೊಂದಾದ ಭಕ್ತಿ ಅದೆಷ್ಟು ಹಿತಕರ ಶಿವನಿಗೆ' ಶಿವಾಭಿವ್ಯಕ್ತಿಗೆ?

ಸುಂದರವಾದ ಬೊಡ್ಡ ಮಾಲೆ, ಪಾದಪೂಜೆಯ ಚಿಕ್ಕಮಾಲೆ ಸಿದ್ಧವಾದವು. ಮಹಾದೇವ ಮಾಳಿಗೆ ಏರಿ ನೋಡಿಬಂದು ಹೇಳಿದನು :

"ನೌಕೆ ನದೀ ದಾಟಿ ಈಚೆಗೆ ಬಂದಿದೆ. ಅದರಲ್ಲಿ ಗುರುಗಳು ಆಗಮಿಸಿದ್ದಾರೆ."

ಕೂಡಲೆ ಅವರು ಸ್ವಾಗತಕ್ಕಾಗಿ ಮಂಗಲದ್ರವ್ಯಗಳೊಡನೆ ಹೆಬ್ಬಾಗಿಲಿಗೆ ಬಂದರು. ಪರಿವಾರದೊಡನೆ ಯುವರಾಜ್ಞಿ ಅಲ್ಲಿ ಕಾದಿದ್ದಳು. ಅಷ್ಟರಲ್ಲಿ ಲಿಂಗರತಿಯೊಡನೆ ನಿಷ್ಕಳಂಕದೇವರು ಆಗಮಿಸಿದರು. ಅವರ ಪಾದ ತೊಳೆದು ಮಾಲೆಹಾಕಿ ಆರತಿ ಮಾಡಿ ವಂದಿಸಿ ಒಳಗೆ ಬಿಜಯಂಗೈಸಿಕೊಂಡರು.

ಅರಮನೆಯಲ್ಲಿ ಇಂದು ತಳಮಳಗೂಡಿದ ಆನಂದೋತ್ಸಾಹಗಳು ನಡೆದಿದ್ದವು. ಅದೊಂದು ವಿಚಿತ್ರ ವಾತಾವರಣವಾಗಿತ್ತು. ಶಿವಯೋಗಿ ಆಗಮಿ

ಸಿದ್ದಾರೆ; ಯುವರಾಜ ಲಿಂಗಾರತಿಗೆ ರಾಜ್ಯಪಟ್ಟಾಭಿಷೇಕವಾಗಲಿದೆ. ಅದಕೆ ಹಿರಿಯ ರಾಜರಾಣಿಯರು ವೈರಾಗ್ಯ ತಾಳಿ, ರಾಜ್ಯತ್ಯಾಗಮಾಡಿ, ದೇಶಾಂತರ ಹೊರಡಲಿದ್ದಾರೆ.

ತಳಮಳವಿಲ್ಲದವರು ಮಹಾದೇವ-ದೇವಿಯರು, ಅವರು ಪರಮಾನಂದ ಭರಿತರಾಗಿ ಗುರುಸೇವೆಯ ಸನ್ನಾಹದಲ್ಲಿ ತೊಡಗಿದ್ದರು. ನಿಷ್ಕಲಂಕ ಮಲ್ಲಿಕಾರ್ಜುನ ದೇವರ ಸ್ನಾನ ಶಿವಾರ್ಚನೆಯಾದ ಬಳಿಕ ಗುರುಪಾದ ಪೂಜಾ ಸಮಾರಂಭ ನಡೆಯಿತು. ಅತ್ತ ವಿಧ್ಯುಕ್ತವಾಗಿ ಪಂಚ ನದನದಿಗಳ ಪುಣ್ಯೋದಕಗಳಿಂದ ಮಂಗಲಸ್ನಾನ ಮಾಡಿದ ಲಿಂಗಾರತಿ ಸಪತ್ನಿಕನಾಗಿ ಬಂದು ಮಾತಾಪಿತರ ಮಾರ್ಗದರ್ಶನದಲ್ಲಿ ಗುರುಪಾದ ಪೂಜೆಯನ್ನು ನೆರವೇರಿಸಿದನು. ಕಾರ್ಯಾವಸರದಲ್ಲಿ ಮಹಾದೇವನು ಮಡದಿಯನ್ನು ‘ ಮಹಾದೇವೀ ’ ಎಂದು ಕೂಗಿ ಕರೆಯುತ್ತಿದ್ದನು. ಅತ್ತ ಗಮನ ಕೊಟ್ಟು ನೋಡಿದ ಗುರುಗಳು ತಮ್ಮ ಶಿಷ್ಯಳಿಗೆ ಮಹಾದೇವಿಯೆಂಬ ಹೆಸರು ಬಹಳ ಸಮಂಜಸವೆನಿಸಿತು. ಅವರಿಗೆ ಅದೊಂದು ಹೊಸ ಹಿಗ್ಗಾಯಿತು. ಆಕೆ ಪಾದೋದಕ ಸ್ವೀಕರಿಸಿ ವಂದಿಸಿದಾಗ ಮಸ್ತಕದ ಮೇಲೆ ಹಸ್ತವನ್ನಿರಿಸಿ ಅವರು ಆಶೀರ್ವದಿಸಿ ‘ ಧನ್ಯಳು ತಾಯೀ ಮಹಾದೇವಿಯಮ್ಮ ನೀನು ! ’ ಎಂದರು. ಅವರ ಮನ ವುಕ್ಕಿ ಬಂದಿತ್ತು ಮಹಾದೇವಿ ಮತ್ತೆ ತಲೆಬಾಗಿ ಕೈಮುಗಿದು ‘ ಗುರುಕೃಪೆ’ ಎಂದು ವಿನಯದುತ್ತರವಿತ್ತಳು. ಅಂದಿನಿಂದ ಆ ಮಹಾತ್ಮಳಿಗೆ ಆ ಮಾರ್ಪಟ್ಟ ಹೆಸರೇ ಮುಂದುವರಿಯಿತು.

ಅತಿಥಿ-ಅಭ್ಯಾಗತರೆಲ್ಲ ಪಾದತೀರ್ಥ ಪ್ರಸಾದಭೋಜನಗಳಿಂದ ಸಂತೃಪ್ತರಾದರು. ಹೊರವಲಯದಲ್ಲಿಯೂ ಅನ್ನ ಸಂತರ್ಪಣೆಯ ಸಮಾರಾಧನೆ ನಡೆದಿತ್ತು. ಮಂತ್ರಿ ರತ್ನಪಾಲನ ಹಿರಿಯತನದಲ್ಲಿ ಎಲ್ಲ ಕಾರ್ಯಗಳು ವ್ಯವಸ್ಥಿತವಾಗಿ ಸಾಗಿದ್ದವು.

ಸ್ವಲ್ಪ ವಿಶ್ರಾಂತಿಯ ನಂತರ ಶಿವಯೋಗಿಗಳ ಸಮ್ಮುಖದಲ್ಲಿ ಮಹಾದೇವ-ಮಹಾದೇವಿಯರು ಅನುಭಾವವಾಣಿಯನ್ನು ಆಲಿಸುತ್ತ ಕುಳಿತರು. ಬಹಳ ಹೊತ್ತು ಕಳೆಯಿತು, ವಿಷಯ ಷಟ್‌ಸ್ಥಲವಿವೇಚನೆ! ದುಃಖದುಮ್ಮಾನವಿಂದ-ಮುಕ್ತಿಯ ಶಾಂತ ಭಾವನೆಯ ನಿಲವಿಗೆ ಏರುವ ಮನೋ

ಧರ್ಮದ ಮಾರ್ಪಾಡುಗಳ ಎಲ್ಲ ಹಂತಗಳು ಷಟ್‌ಸ್ಥಲಮಾರ್ಗದಲ್ಲಿರುವ ದನ್ನು ವಿವರಿಸಿ ಮನಗಾಣಿಸಿದರು ಗುರುಗಳು! ಮಹಾದೇವನಿಗೆ ಶಿವ ಯೋಗದ ಹಾದಿ ಕಣ್ಣಮುಂದೆ ಕಟ್ಟಿತು. ಲೋಕದಾಟದಿಂದ ಕಾಲು ಕೀಳು ವಾತುರ ತೀರಾ ಹೆಚ್ಚಾಯಿತು. ಅವನಂತೆ ಅವನ ಮಹಾದೇವಿ!

ಬೇಗಿನ ಹೊತ್ತು ಬರುತ್ತಿರಲು, ಮಂತ್ರಿ ರತ್ನಪಾಲನು ಮಿತಪರಿವಾರ ದೊಂದಿಗೆ ಬಂದು ವಂದಿಸಿ, ಪಟ್ಟಭದ್ರತೆಯ ಉತ್ಸವಕ್ಕೆ ತಾವು ದಯಮಾಡಿಸ ಬೇಕೆಂದು ಆ ಪೂಜ್ಯತ್ರಯರನ್ನು ಪ್ರಾರ್ಥಿಸಿದನು.

ಅತ್ತ ನಿರಾಡಂಬರದ ರೀತಿಯಲ್ಲಿ ಸಿಂಹಾಸನಾರೋಹಣದ ಏರ್ಪಾಡು ನಡೆದಿತ್ತು. ಪ್ರಜೆಗಳು ಅಧಿಕಾರಿಗಳು ಮನ್ನೆಯರು ಓಲಗದಲ್ಲಿ ಆಸೀನರಾಗಿ ದ್ದರು. ಸಿಂಹಾಸನವನ್ನು ಅಲಂಕರಿಸಿ ಪೂಜಿಸಲಾಗಿತ್ತು. ನೂತನ ರಾಜ ದಂಪತಿಗಳನ್ನು ಗೌರವಿಸಿ ಕರೆದುಕೊಂಡು ಬರಲಾಗಿತ್ತು. ಸಭೆಯಲ್ಲಿ ಗಂಭೀರ ವಾದ ಮೌನ ತಾನೇತಾನಾಗಿ ಆವರಿಸಿತ್ತು. ಸಭಿಕರ ಸುಖದುಃಖ ಸಮ್ಮಿಶ್ರ ಭಾವವು ಅದಕ್ಕೆ ಕಾರಣವಾಗಿತ್ತು. ಮಹಾದೇವ ಮಹಾದೇವಿಯರನ್ನು ಹಿಂದು ಗೊಂಡು ಶಿವಯೋಗಿಗಳು ಸಭೆಯಲ್ಲಿ ಬರಲು ಸಭಿಕರು ಎದ್ದುನಿಂತು ಕೈ ಮುಗಿದು ತಮ್ಮ ಭಕ್ತಿ ಗೌರವಗಳನ್ನು ಸಲ್ಲಿಸಿದರು. ಲಿಂಗಾರತಿಯೂ ಅವನ ಸತಿಯೂ ಮೂವರಿಗೂ ವಂದಿಸಿ ಅವರ ಪಾದರೇಣುವನ್ನು ಮುಡಿಯಲ್ಲಿ ತಳೆದರು. ನಿಷ್ಕಳಂಕ ದೇವರು ತಮಗಾಗಿದ್ದ ಪೀಠದಲ್ಲಿ ಕುಳ್ಳಿರಲು ವೈದಿ ಕರ ಅನುಜ್ಞೆಯಂತೆ ಮಹಾದೇವನು ಲಿಂಗಾರತಿಗೆ ರಾಜಲಾಂಛನಗಳನ್ನು ತೊಡಿಸಿ ಸಿಂಹಾಸನ ಮೇಲೆ ಕುಳ್ಳಿರಿಸಿ ಮಸ್ತಕದ ಮೇಲೆ ಕಿರೀಟವನ್ನಿಟ್ಟನು. ಸಾಲಂಕೃತಳಾಗಿದ್ದ ಸೊಸೆಯನ್ನು ಮಹಾದೇವಿ ಕೈಹಿಡಿದು ಲಿಂಗಾರತಿಯ ಕೆಲದಲ್ಲಿ ಕೂಡ್ರಿಸಿ ಇಬ್ಬರಿಗೂ ಆರತಿ ಎತ್ತಿ ಬೆಳಗಿದಳು. ಅಲ್ಲಿಗೆ ವೇದಘೋಷ ಸಾಂಗವಾಗಿ ಜಯಘೋಷ ಕರತಾಡನಗಳಾದವು. ಮಂತ್ರಿ ಮನ್ನೆಯರಿಂದ ಕಾಣಿಕೆಗಳು ಸಂದಾಯವಾದವು. ನಿಷ್ಕಳಂಕ ಶಿವಯೋಗಿ ಹೊಸ ಆಳಿಕೆಗೆ ಯಶಕೋರಿ ಮಂಗಲಾಶೀರ್ವಾದ ಮಾಡಿದರು. ಅವರು ಕೊನೆಯಲ್ಲಿ ಶುಭ ಮಸ್ತು, ಶುಭಮಸ್ತು, ಶುಭಮಸ್ತು ಎಂದು ತ್ರಿವಾರ ಹಾರೈಕೆಯನ್ನು ಉಚ್ಚ ರಿಸಿದಾಗ ಪುನಃ ಕರತಾಡನವಾದವು.

ವೇದಿಕೆಯ ಅಂಚಿನಲ್ಲಿ ಕುಳಿತು ಸಮಯಕ್ಕೆ ಕಾಯ್ದುಂತಿದ್ದ ಮಹಾ ದೇವದೇವಿಯರು ಕರತಾಡನದ ಸದ್ದಿನಲ್ಲಿಯೇ ಕೆಳಗಿಳಿದು ಹೆಬ್ಬಾಗಿಲತ್ತ ಮುಖ

ಮಾಡಿ ಮರಳಿಕೂಡ ನೋಡದೇ ಮೆಲ್ಲನೆ ಜತೆಗೂಡಿ ಮುನ್ನಡೆದರು. ಶಿವಯೋಗಿಗಳು ಹಿಂದೆ ಹೊರಟರು. ಸಭಿಕರೆಲ್ಲ ಚಿತ್ರದ ಗೊಂಬೆಗಳಂತೆ ನೋಡುತ್ತ ನಿಂತರು. ಕೆಲವರು ಬಿಕ್ಕಳಿಸುವ ಕಂಠಧ್ವನಿಯಲ್ಲದೇ ಬೇರೆ ಶಬ್ದವಿರಲಿಲ್ಲ. ನೂತನ ರಾಜರಾಣಿಯರು ತಲೆಬಾಗಿ ಕಣ್ತುಂಬಿ ನಿಂತಿದ್ದರು. ಪೂಜ್ಯರೇ ನಿರ್ಗಮಿಸಿದ ಬಳಿಕ ಸಭೆಯ ಕಾರ್ಯಗಳು ಸಂಕ್ಷೇಪವಾಗಿ ನಡೆದು ಮುಕ್ತಾಯಗೊಂಡವು.

ರಾಜಭವನದ ಮಹಾದ್ವಾರವನ್ನು ದಾಟಿದ ಮೇಲೆ ಮಹಾದೇವನು ಅಲ್ಲಿ ಮೊದಲೇ ತಂದಿರಿಸಿದ್ದ ಕೊಡಲಿಯನ್ನು ಹೆಗಲಿಗೇರಿಸಿಕೊಂಡು ನಗರದ ಬೀದಿಯಲ್ಲಿ ನಿರಾತಂಕವಾಗಿ ನಡೆದನು. ಹಿಂದೆ ಗುರುದೇವ ಮತ್ತು ಮಹಾದೇವಿಯರಿದ್ದರು. ಸೌಧಾ ತೀರಕ್ಕೆ ಬಂದು, ಕಳವಳದಿಂದ ಹಿಂಬಾಲಿಸಿದ ಸಹಸ್ರಾರು ನಾಗರಿಕರನ್ನು ಅಲ್ಲಿ ಸಮಾಧಾನಗೊಳಿಸಿ ಅವರಿಂದ ಬೀಳ್ಕೊಂಡು ಡೋಣಿಯನ್ನೇರಿದರು. ಶಿವಯೋಗಿಗಳೇ ನೌಕೆಯ ಹುಟ್ಟು ಹಿಡಿದು ನಡಿಸಿ ಆಶ್ರಮಕ್ಕೆ ಕರಕೊಂಡು ಬಂದರು. ಜೀವನನ್ನು ಮಾಯೆಯ ಕಳ್ಳಕೆಸರಿನಿಂದ ಮೇಲೆತ್ತಿ ಮೈದೊಳೆದು ಭವಸಾಗರವ ದಾಟಿಸುವ ಸಮರ್ಥ ಅಂಬಿಗನು ಗುರುವೇ ಅಲ್ಲವೇ? ಮಾಂಡವ್ಯನಗರದಲ್ಲಿ ನಡೆದ ಇಂದಿನ ಘಟನೆಗಳೆಲ್ಲ ಈ ರಹಸ್ಯದ ಬಹಿರಂಗ ರೂಪಗಳೇ ಆದಂತಿದ್ದವು.

ಮಾಂಡವ್ಯಪುರದಲ್ಲಿ ನಡೆಯುತ್ತಿದ್ದ ವಿದ್ಯಮಾನಗಳತ್ತ ಗಮನವಿಟ್ಟು ತಿಳಿಯುತ್ತಿದ್ದ ಸೂರಜ್‌ದೇವನು ಈ ವೈರಾಗ್ಯಮೂರ್ತಿಗಳ ಪ್ರಯಾಣಕ್ಕೆ ಒಂದು ಸೌಕರ್ಯವನ್ನು ಯೋಜಿಸಿದ್ದನು. ಅದರಂತೆ ಸನಿಹದಲ್ಲಿ ಬೀಡಾರ ಮಾಡಿದ ಕರ್ನಾಟಕದ ವರ್ತಕರ ತಂಡದಿಂದ ಇಬ್ಬರು ಪ್ರಮುಖರನ್ನು ಕರೆದುಕೊಂಡು ಆಶ್ರಮಕ್ಕೆ ಬಂದಿದ್ದನು. ಡೋಣಿಯಿಂದಿಳಿದು ಬಂದ ಗುರುಗಳಿಗೂ ಶರಣರಿಗೂ ವಂದಿಸಿ ತನ್ನ ಯೋಜನೆ ತಿಳಿಸಿ ಆ ಸ್ನೇಹಿತರ ಪರಿಚಯ ಮಾಡಿಕೊಟ್ಟನು. ಗುರುಗಳು ಸಂತೋಷಿಸಿದರು.

ಪ್ರಾತಃಕಾಲದಲ್ಲಿ ಮಹಾದೇವನು ಆಶ್ರಮದಂಗಳದಲ್ಲಿ ಬಿದ್ದಿದ್ದ ತುಂಡ ಗಟ್ಟಿಗೆಗಳನ್ನು ಒಡೆದು ಹಾಕಿದನು. ಅಷ್ಟರಲ್ಲಿ ಮಹಾದೇವಿ ಗುರುಮಂದಿರದ ಮುಂದೆ ಸಾರಣೆ ಮಾಡಿ ಶೋಭೆಗೊಳಿಸಿದ್ದಳು. ಬಳಿಕ ಅವರಿಬ್ಬರು ಸ್ನಾನಶಿವಾರ್ಚನೆ ಮಾಡಿ ಗುರುಪಾದ ತೀರ್ಥ-ಪ್ರಸಾದಪಡೆದರು. ಕೊನೆಯ ಸಂದೇಶಕ್ಕಾಗಿ ಸಮ್ಮುಖದಲ್ಲಿ ನಿಂತು:

'ಭವಸಾಗರಕ್ಕೆ ಭದ್ರಭೈತ್ರವನೆ ಪಡೆದಿತ್ತು ಪೂರೆದ ಗುರುವೇ
ಶಿವಯೋಗ ಮಂದಿರದ ಬಾಗಿಲವ ತೇಗೆದಿಟ್ಟು ಕೊಟ್ಟ ಗುರುವೇ
ಪರತತ್ವ ಲಿಂಗವನು ಪಿಡಿದೆನ್ನಕರಕಿತ್ತ ಕರುಣಗುರುವೇ
ನಿರುತನೆಲೆಯಾಗೆನ್ನ ಹೃನ್ಮನಂಗಳಲಿ ಕಲೆಯಾಗು ಗುರುವೇ'

ಹೀಗೆಂದು ಸ್ತುತಿಸಿ ದಂಡ ವತ್ ಪ್ರಣಾಮಗಳನ್ನು ಅರ್ಪಿಸಿದರು.

ಕಂಠ ಬಿಗಿದು ಬಂದ ಗುರುಗಳು–'ರಾಜನ್........ ಎನ್ನವಷ್ಟರಲ್ಲಿ ಮಹಾದೇವ ಅದನ್ನು ತಡೆದು ಹೀಗೆಂದ:

"ಗುರುವೆ, ಗುರುವೆ, ನನ್ನ ಪ್ರಾರ್ಥನೆ! ಹಾಗೆನ್ನದಿರಿ. ರಾಜ, ಮಹಾ ದೇವ ಈ ಅಂಕಿತ ಇನ್ನು ನನಗೆ ಬೇಡವೆಂದು ಬೇಡಿಕೊಳ್ಳುವೆ. ಅಹಂಕಾರದ ಬೀಜವಿರುವ ಪೂರ್ವಾಶ್ರಯದ ಸ್ಮರಣ ಇದರಿಂದಾಗದೆ ಬಿಡದು. ರಾಜತ್ವ ವನ್ನು ತ್ಯಜಿಸಿದ ಧೀರನೆಂಬ ತ್ಯಾಗದ ಅಭಿಮಾನವೂ ತೊಡಕಾಗಿ ಕಾಡಿ ಕಂಗೆ ಡಿಸೀತು. ಕೈಂಕರ್ಯದ ಸಂಕೇತವೊಂದನ್ನು ಕೊಟ್ಟು ಕರುಣಿಸಬೇಕು ಗುರುವೇ

"ಮಹಾನುಭಾವ, ನಿನ್ನ ಭಕ್ತಿಯಷ್ಟೇ ತೀಕ್ಷ್ಣವಾಗಿದೆ ನಿನ್ನ ವಿರಕ್ತಿ. ನಿಮಗೆ ಗುರುವೆನಿಸಿ ನಾನು ಧನ್ಯನಾಗಿದ್ದೇನೆ. ನಾನು ಉಪದೇಶಿಸಿದೆನೆಂಬುದು ನಿಮಿತ್ತ ಮಾತ್ರ! ನೀನು ಪರಮಾನುಭಾವದ ನಿಧಿ! ಅರುವಿನ ಆಗರ ಈ ತಾಯಿ ಲೋಕದ ಕ್ರಿಯೆಗಳಿಗಾಗಿ ಸಂಕೇತವೊಂದು ಬೇಕಷ್ಟೇ ? ಲೋಭ–ಮೋಹಗಳ ಬಲದಿಂದ ಕಾಡುವ ಮಾಯೆಯ ದಾಳಿಯನ್ನು ಮಾರಾಂತು ತಡೆದ ಸಂಕೇತವೇ ಒಳಗಿರುವ ಮೇಲೆ ಅರ್ಥವಿಲ್ಲದ 'ಮಾರ' ಎಂಬ ಹೆಸರಿರಲಿ, ಸರಿಯೇ ?

"ಆಗಲಿ ಗುರುವೇ" ಎಂದನು.

ತಲೆಬಾಗಿ ಕೈ ಜೋಡಿಸಿ ವಿನಯ ದಿಂದ ಸ್ವಲ್ಪದೂರ ನಿಂತಿದ್ದ ವಣಿಜ ರತ್ತ ನೋಡಿ ಗುರುಗಳು–'ಮಾರಯ್ಯನವರನ್ನು ಮಹಾದೇವಿಯಮ್ಮನನ್ನು ಕಲ್ಯಾಣದ ವರೆಗೂ ಸಂಗಡಕರೆದುಕೊಂಡು ಹೋಗುವಿರಾ ಅಣ್ಣಗಳಿರಾ?"

"ಕರೆದು ಕೊಂಡು ಹೋಗುತ್ತೇವೆ ಬುದ್ಧಿ, ನಮಗೆ ಬಹಳ ಸಂತೋಷ"

"ಹೋಗಿಬನ್ನಿ ಮಾರಯ್ಯ, ಹೋಗಿಬನ್ನಿ ತಾಯೀ! ಬೆಳಗಲಿರುವ ನಿಮ್ಮಗಳ ಆತ್ಮಪ್ರಭೆಗೆ ನನ್ನ ವಂದನೆ.,, ಎಂದು ನಿಷ್ಕಳಂಕ ಮಲ್ಲಿಕಾರ್ಜುನರು ಬಾಗಿ ಕೈಮುಗಿದರು. ಮಾರಯ್ಯ ಮಹಾದೇವಿಯವರು ಗುರುತೇಜವನ್ನು ಹೃದಯದಲ್ಲಿ ಅಡಗಿಸಿಕೊಂಡು, ಮುಗಿದ ಕೈಯೊಡನೆ ಹಿಂದೆಹಿಂದೆ ಸರಿಯು ತ್ತ ಮರೆಯಾಗಿ ಮುಂದೆ ನಡೆದರು. ಆಗ ಕಾಯಕದ ಕೊಡಲಿ ಕೈಯಲ್ಲಿತ್ತು.

# ೮. ಕಾಯಕದೊಡನೆ ಪ್ರಯಾಣ

ಮಾರಯ್ಯನವರನ್ನು ಕರೆದುಕೊಂಡು ಹೋದ ಇಬ್ಬರು ವಣಿಜರು ಸಂಜೆಯೊಳಗಾಗಿ ತಮ್ಮ ಬೀಡಾರವನ್ನು ಸೇರಿದರು. ಅಲ್ಲಿಗೆ ಸಪಾದಲಕ್ಷದ ಸೀಮೆಯನ್ನು ದಾಟಿ ಬರಲಾಗಿತ್ತು. ಮಾರಯ್ಯ ಮಹಾದೇವಿಯರ ಕಾಲುಗಳಿಗೆ ಗುರುಳೆ ಬಂದಿದ್ದವು. ಮನವು ನೊಂದಿರಲಿಲ್ಲ ಕುಂದಿರಲಿಲ್ಲ. ದೇಹದ ದಣಿವ ಗಣನೆಗೆ ತಂದಿರಲಿಲ್ಲ. ಬೇಗನೆ ಮಾರಯ್ಯ ಒಂದು ಹೊರೆ ಕಟ್ಟಿಗೆ ತಂದು ಬೀಡಾರದ ಅಗ್ನಿ ಕುಂಡದ ಮುಂದೆ ಚೆಲ್ಲಿದನು. ಬಳಿಕ ಇಬ್ಬರೂ ಹತ್ತಿರದ ತಟಾಕದ ಬಳಿಯ ಒಂದು ಗಿಡದ ಬುಡದಲ್ಲಿ ಲಿಂಗಾರ್ಚನೆ ಮಾಡಿದರು. ಅಷ್ಟರಲ್ಲಿ ಅವರ ಹತ್ತಿರ ತಂದಿರಿಸಿದ ಹುರಿಗಡಲೆ ಬೆಲ್ಲವನ್ನು ನೈವೇದ್ಯ ಮಾಡಿ ಪ್ರಸಾದ ಸೇವಿಸಿ ಮಲಗಿಕೊಂಡರು.

ಮರುದಿನ ವರ್ತಕರ ಬೀಡು ಕೀಳುವಂತಿರಲಿಲ್ಲ. ವ್ಯಾಪಾರಕ್ಕಾಗಿ ಚದರಿ ಹೋದವರು ಮರಳಿ ಬಂದಮೇಲೆ ದಕ್ಷಿಣಕ್ಕೆ ಪ್ರಯಾಣ ಬೆಳಿಸಬೇಕಾಗಿತ್ತು. ಅಂದು ಮಾರಯ್ಯ ಬೀಡಿನ ಪಾಕಶಾಲೆಗೆ ಕಟ್ಟಿಗೆ ಕಡಿದು ತಂದು ಹಾಕಿದನು. ಅವನ ಇಚ್ಛೆಯಂತೆ ಅಲ್ಲಿಯ ಅಡುಗೆಯವರು ಅವನಿಗೆ ಬೇರೆಯಾಗಿ ಧಾನ್ಯಗಳನ್ನು ಕೊಟ್ಟರು. ಮಹಾದೇವಿ ಮಡಕೆಯಲ್ಲಿ ಕಾಳು ಕುದಿಸಿದಳು. ಲಿಂಗ ಜಂಗಮ ದಾಸೋಹ ನಡಿಸಿ ಪ್ರಸಾದ ಪಡೆದು ತೃಪ್ತರಾದರು.

ವರ್ತಕರೊಡನೆ ವ್ಯರ್ಥ ದಿನಗಳೆಯುತ್ತ ಪ್ರಯಾಣಿಸುವದು ಸರಿದೋರಲಿಲ್ಲ. ಅವರಿಗೆ ಆತುರ ಹೆಚ್ಚಾಗಿತ್ತು. ಅಂದೇ ಮಾರಯ್ಯ ಸಂಜೆಯಲ್ಲಿ ಆ ಹಿರಿಯರನ್ನು ಕಂಡು, ನಾಳೆ ತಾವು ಗ್ರಾಮದಿಂದ ಗ್ರಾಮಕ್ಕೆ ಮುಂದುವರಿಯಬೇಕೆಂದಿರುವದನ್ನು ತಿಳಿಸಿದನು. ವಣಿಜರು ಈ ಶರಣಶರಣೆಯರನ್ನು ಯಕ್ಕ, ಒಂಟೆ, ಎತ್ತುಗಳ ಮೇಲೆ ಕೂಡ್ರಿಸಿ ಕರೆದೊಯ್ಯಬೇಕೆಂದು ಮಾಡಿದ್ದರು. ಅವರ ವಿಚಾರವನ್ನು ಮಾರಯ್ಯ ಒಪ್ಪಲಿಲ್ಲ. ಅವರು ಅನಿವಾರ್ಯವಾಗಿ ಸುಮ್ಮನಾದರು.

ಮರುದಿನ ಶರಣದಂಪತಿಗಳು ಇಬ್ಬರೇ ಹೊರಟರು. ಮಾರ್ಗದ ಬದಿಗಳಲ್ಲಿ ಮಾರಯ್ಯ ಸೌದೆ ಸಂಗ್ರಹಿಸಿ ಕಟ್ಟಿ, ಮುಂದಿನ ಗ್ರಾಮದ ಒಂದು ಅಂಗಡಿ

ಯ ಮುಂದೆ ಚಲ್ಲಿ ಸುಮ್ಮನೆ ನಿಂತು ಬಿಟ್ಟನು. ಇವನ ಭಾವವನ್ನು ತಿಳಿದ ಅಂಗಡಿಕಾರ ಏನು ಬೇಕೆಂದು ಕೇಳಿ ತಕ್ಕಸಾಮಗ್ರಿಕೊಟ್ಟನು. ಪ್ರಸಾದ ವ್ಯವಸ್ಥೆಯಾಯಿತು.

ವಾಯುವನ್ನು ಅಪ್ಪಿದ ಸುಗಂಧವು ಗಾಳಿ ನೂಕಿದತ್ತ ಹರಿಯುವದು ಸಹಜ. ಸಾಗರವ ಸೇರಿದ ನೀರು ತೆರೆಗಳಿಗಧೀನವಾಗಿ ನರ್ತಿಸುವದು ಸಹಜ. ವೈರಾಗ್ಯವನ್ನು ಅಪ್ಪಿದ ಶರಣದಂಪತಿಗಳು ಶಿವಭಾವಸೆಳೆದತ್ತ ಲೀಲಾಮೂರ್ತಿಗಳಾಗಿ ನಡೆದಿದ್ದರು. ಯಾವ ದಾರಿ ಎಂಬುದು ಗೊತ್ತಿಲ್ಲ. ಕಲ್ಯಾಣದ ಪ್ರಜ್ಞೆಯೊಂದು ಅವರ ಪ್ರಯಾಣಕ್ಕೆ ದಿಕ್ಕಾಗಿತ್ತು. ತಿಳಿವಲ್ಲಿ ಭಾಷೆಯ ಬಳಕೆ! ತಿಳಿಯದಿದ್ದಲ್ಲಿ ಸನ್ನೆಯು ಸಾಧನೆ. ಅವರ ನಿಷ್ಕಳಂಕ ನಿರ್ಭಯದ ಭಾವವನ್ನು ರಾಜಸಿಗಳು ಕಂಡು ಕರಗಿ ತಲೆಬಾಗಿ ಗೌರವಿಸುತ್ತಿದ್ದರು. ತಾಮಸಿಗಳು ದುರ್ಬುದ್ಧಿಯಿಂದ ದುಷ್ಕರ್ಮದ ವಿಚಾರಮಾಡಿದರೂ ಹೆಗಲಗೊಡಲಿಯ ದರ್ಶನದಿಂದ ಹೆದರಿ ದೂರ ಹೋಗುತ್ತಿದ್ದರು. ಸಾತ್ವಿಕರಿಗೆ ಶರಣನಾಗಿದ್ದನು. ದುಷ್ಟರ ಕಣ್ಣಿಗೆ ಕ್ಷತ್ರಿಯವೀರ! ಕುಠಾರಪ್ರಾಯ! ಯಾವ ಶ್ವಾಪದಗಳ ಭಯವೂ ಅವನಿಗಿರಲಿಲ್ಲ. ಭಿಕ್ಷೆ ಬೇಡುತ್ತಿರಲಿಲ್ಲ. ಕಾಯಕ ಸಲ್ಲದೆ ಉಚಿತ ಧಾನ್ಯ ಕೈಕೊಳ್ಳುತ್ತಿರಲಿಲ್ಲ. ಕಾಯಕದಿಂದ ಸಾಧ್ಯವಾದಷ್ಟು ದಾಸೋಹತೃಪ್ತಿ. ಅದೇ ಅವರಿಗೆ ಬಲವಾಗಿತ್ತು. ಕಷ್ಟವನ್ನು ಎದುರಿಸುವ ಕೆಚ್ಚು ಹೆಚ್ಚಾಗುತ್ತಿತ್ತು. ಬಸವಣ್ಣನ ಸನ್ನಿಧಿಯ ಸೇರುವ ನಿರ್ಧಾರ ಅವರ ಚೇತನಶಕ್ತಿಯಾಗಿತ್ತು. ಎದುರುದಾರಿಯಿಂದ ಬರುವವರಿಂದ ಕಲ್ಯಾಣದ ಕತೆಗಳನ್ನೂ ಕೇಳಿ ಆನಂದಿಸುವದೇ ತಮ್ಮ ಶರೀರಾಯಾಸ ಮರೆಯುವ ಸಾಧನ! ತಾನು ಕಳಿಸಿದ ನಿಜಲಿಂಗನು ಬಸವಣ್ಣನ ಚಿಕ್ಕಯ್ಯನಾದುದು ಗೊತ್ತಾಗಿತ್ತು. ಅವನು ಧನ್ಯನೆಂದು ಭಾವಿಸಿದ್ದರು. ಅವರ ಸರ್ವಾಂಗವು ಬಸವಭಾವಮಯವಾಗಿತ್ತು.

ಅವರು ಬೇಕಾದಾಗ ದಾರಿಯಲ್ಲಿ ಪ್ರಯಾಣಿಕರ ತಂಡಗಳ ಜೊತೆಯಲ್ಲಿ ನಡೆಯುವರು. ಅದರಿಂದ ವಿಲಂಬವಾಗುವದೆನಿಸಿದಾಗ ಬಿಟ್ಟು ಬೇರೆಯಾಗಿ ಹೊರಡುವರು. ಬರಬರುತ್ತ ಕಲ್ಯಾಣಕ್ಕೆಂದೇ ಹೊರಟಿರುವ ಬೇರೆ ಜಿಜ್ಞಾಸುಗಳು ಜತೆಯಾದರು. ಅಷ್ಟರಲ್ಲಿ ಇವರ ಮನೋಧಾರ್ಢ್ಯದಂತೆ ಇವರ ಶರೀರವೂ ಗಟ್ಟಿಯಾದವು. ಅಂಗಾಲು ಬಿರುಸಾದವು. ಸ್ನಾಯುಗಳು ಹುರಿಗೊಂಡವು. ಮಹಾದೇವಿಯಮ್ಮನ ಮನಸ್ಸು ಪತಿಗಿಂತ ಮೊದಲು ಮುಂದಾಗುತ್ತಿತ್ತು ಮಾರ್ಗಕ್ರಮಣಕ್ಕೆ !

ಪಂಜಾಬ, ರಾಜಸ್ಥಾನ, ಗುರ್ಜರ ದೇಶಗಳನ್ನು ಕಳೆದು ಚಾಲುಕ್ಯ ಸಾಮ್ರಾಜ್ಯದಲ್ಲಿಯ ಮರಹಟರ ನಾಡಿಗೆ ಬಂದಿದ್ದರು. ಮರಹಟರ ಗ್ರಾಮಗಳಲ್ಲಿ ಕಟ್ಟಿಗೆಯ ಹೊರೆ ಹೊತ್ತು ಹೋಗುವಾಗ 'ಓ ಮೋಳಿಗ್ಯಾಚಿ ಬಾಬಾ' ಎಂದು ಕೂಗಿ ಕರೆಯುತ್ತಿದ್ದರು. ಕನ್ನಡದ ಗಡಿಗೆ ಬಂದಾಗ 'ಮೋಳಿಗೆ ಅಪ್ಪ' ಎಂದೂ ಮುಂದೆ ಮೋಳಿಗೆಯ್ಯ' ಎಂದೂ ಸಂಬೋಧಿಸಲ್ಪಟ್ಟ ಮಾರಯ್ಯ, ಕಲ್ಯಾಣ ತಲಪುವದರೊಳಗಾಗಿ ಜತೆಯ ಪ್ರಯಾಣಿಕರಲ್ಲಿ 'ಮೋಳಿಗೆಯ ಮಾರಯ್ಯ' ಎಂದು ಪರಿಚಿತರಾದರು

ಮಾಣಿಕಶೆಟ್ಟಿ ಸ್ವಲ್ಪ ಮೊದಲು ಕಲ್ಯಾಣವನ್ನು ತಲುಪಿದ್ದನು. ಮಹಾದೇವ ಭೂಪಾಲನ ಮನದ ಪರಿವರ್ತನೆಯ ಆವೇಗವನ್ನು ಆವನು ಸ್ವತಃ ನೋಡಿ ಅನುಭವ ಹೊಂದಿದ್ದನು. ರಾಜ್ಯತ್ಯಾಗದ ವಿಷಯವನ್ನೂ ಕಾಶ್ಮೀರದಲ್ಲಿಯ ತನ್ನ ಸರಕು ಸಂಗ್ರಹದ ಕಾಲದಲ್ಲಿ ಕೇಳಿ ತಿಳಿದಿದ್ದನು. ವೈರಾಗ್ಯ ತಾಳಿ ದಂಪತಿಗಳು ಕಲ್ಯಾಣಕ್ಕೆ ಹೊರಟಿದ್ದಾರೆಂದೂ ತಮ್ಮ ಹಿಂದೆ ಬರುತ್ತಿದ್ದಾರೆಂದೂ ಅವನಿಗೆ ತೀವ್ರಗಾಮಿಗಳಿಂದ ಗೊತ್ತಾಗಿತ್ತು. ಈ ಸಮಾಚಾರವನ್ನು ಆತನು ಕಲ್ಯಾಣದಲ್ಲಿ ತಮ್ಮ ಸಂಘದ ಸದಸ್ಯರಿಗೆ ಅವರು ಅಚ್ಚರಿಬಡುವಂತೆ ಉತ್ಸಾಹದಿಂದ ವರ್ಣಿಸಿ ಹೇಳಿದ್ದನು. ದಿನಾಲು ನೂರಾರು ಮಂದಿ ಹೊರಗಿನವರು ಬಂದು ಮಹಾಮನೆಗೆ ಹೋಗುತ್ತಿದ್ದರು. ಆದರೆ ಕಾಶ್ಮೀರದ ರಾಜನ ತ್ಯಾಗ ಜೀವನದ ತೀವ್ರತೆ ಅಸಾಮಾನ್ಯವಾಗಿತ್ತು. ಕಷ್ಟತಾಪತ್ರಯಗಳಿದ್ದ ಸಂಸಾರವನ್ನು ತ್ಯಜಿಸುವದು ಆಗಾಧವಲ್ಲ, ನಿಷ್ಕಂಟಕ ರಾಜಾಧಿಕಾರ, ಸಕಲೈಶ್ವರ್ಯ ಸಂಪನ್ನತೆ, ಯಾವ ಕಷ್ಟನೋವುಗಳ ಬಾಧೆಯೂ ಇಲ್ಲ. ಹೀಗಿರುವ ರಾಜನೂ ನೆಲದ ಮೇಲೆ ಕಾಲಿಡದ ರಾಣಿಯೂ ಸರ್ವ ಸುಖೋಪಭೋಗಕ್ಕೂ ತಿಲಾಂಜಲಿಯನ್ನಿತ್ತು ಸರ್ವಬಂಧನಗಳನ್ನೂ ಸುಲಭವಾಗಿ ಕಳಚಿದ್ದು ವಿಶೇಷವಾಗಿತ್ತು. ಪವಾಡವಾಗಿತ್ತು. ಪವಾಡವೆಂದರೆ ಮುಗ್ಧರನ್ನು ಮೆಚ್ಚಿಸುವದಕ್ಕೆ ರೂಪಿಸಿದ ಪವಾಡವಲ್ಲ; ಸಹಜ ಕ್ರಿಯೆಗಳನ್ನು ಉಲ್ಲಂಘಿಸಿದ ರೀತಿಯ ಅತಿರಂಜಿತ ಅಸಹಜ ಪವಾಡವಲ್ಲ; ಬುದ್ಧಿವಂತರು ಜ್ಞಾನಿಗಳು ಮೆಚ್ಚಿ ಹೌದೆನ್ನುವ ಹಾಗು ಸರ್ವೇಶನ ಕಟ್ಟಳೆಗಳನ್ನು ಮೀರದ ಅದ್ಭುತವಾದ ವಿಶಿಷ್ಟ ಪವಾಡವಿದು. ವಾಣಿಜ್ಯಕೇಂದ್ರಗಳಿಂದ ಹರಡಿದ ವೃತ್ತಾಂತವು ಮಹಮನೆಗೂ ಮುಟ್ಟಿತು. ಶರಣರೆಲ್ಲ ಕುತೂಹಲಿಗಳಾದರು. ಮಹಾದೇವ ಭೂಪಾಲನ ವೈರಾಗ್ಯಕ್ಕೆ ಹಿನ್ನೆಲೆಯಾಗಿರುವ ಅನೇಕ ಸಂಗ

ತಿಗಳನ್ನು ಅಲ್ಲಿಯುವನೇ ಆದ ನಿಜಲಿಂಗಚಿಕ್ಕಯ್ಯನಿಂದ ತಿಳಿಯುವದಕ್ಕೂ ಚರ್ಚಿಸುವದಕ್ಕೂ ಆರಂಭವಾಯಿತು. ಬಸವಣ್ಣನವರೂ ಸರ್ವವನ್ನು ಅರಿಕೆ ಮಾಡಿಕೊಂಡರು ಕಾಶ್ಮೀರದ ಜಂಗಮರನ್ನು ಮಹಮನೆಗೆ ಬರಮಾಡಿಕೊಳ್ಳು ವದನ್ನು ಪ್ರತಿಭಟಿಸಿ ತಡೆಯಲು ಮಹಾದೇವರಾಜನು ತನ್ನ ಸೇನಾಧಿಕಾರಿ ನಿಜಲಿಂಗನನ್ನು ಕಲ್ಯಾಣಕ್ಕೆ ಕಳಿಸಿದ್ದನು. ನಿಜಲಿಂಗನು ಬಸವಣ್ಣನವರ ಭಕ್ತಿಪ್ರಭಾವಕ್ಕೆ ಒಳಗಾದನು ತನ್ನ ಸಂಚಿಗಾಗಿ ಕ್ಷಮೆ ಕೋರಿದನು. ಬಸವ ಣ್ಣನು ಅವನನ್ನು ತನ್ನ ಚಿಕ್ಕಯ್ಯನೆಂದು ಸನ್ಮಾನಿಸಿದನು. ಬಳಿಕ ನಿಜಲಿಂಗ ಚಿಕ್ಕಯ್ಯನು ಕಾಶ್ಮೀರಕ್ಕೆ ಮರಳದೆ ಶಿವಾನುಭವ ಸಾಧಕನಾಗಿ ಕಲ್ಯಾಣ ದಲ್ಲಿಯೇ ಉಳಿದಿದ್ದನು.

ಅರಣ್ಯಗಳಿಂದ ತಾಡಗರಿಗಳನ್ನು ತಂದು ಕತ್ತರಿಸಿ ಬರವಣಿಗೆಗೆ ಓಲೆ ಗಳನ್ನು ಮಾಡುವದು ನಿಜಲಿಂಗಚಿಕ್ಕಯ್ಯನ ಕಾಯಕವಾಗಿತ್ತು. ಆತನು ತಾಡಬನಗಳಿಗಾಗಿ ಕಲ್ಯಾಣದ ಉತ್ತರದ ಕಡೆಗೆ ಹೋಗುತ್ತ ನಾಗಸಾರಿಕಾ, ವಲ್ಲಭಿ, ಭೃಗುಕುಚ್ಛಗಳ ಕಡೆಯಿಂದ ಬರುವ ಪ್ರಯಾಣಿಕರಿಂದ ಮಾರ ಯ್ಯನವರು ಎಲ್ಲಿಯವರೆಗೆ ಬಂದಿದ್ದಾರೆಂಬದನ್ನು ತಿಳಿದುಕೊಳ್ಳುತ್ತ ಮಹ ಮನೆಗೆ ವರದಿ ಮಾಡಹತ್ತಿದ್ದನು.

ಈ ಎಲ್ಲ ಆನುಪೂರ್ವಿಯಲ್ಲಿ ಶರಣರಬಳಗ ಬಸವಣ್ಣನವರ ಹಿರಿಯ ತನದಲ್ಲಿ ಮಾರಯ್ಯನವರನ್ನು ನಗರದ ಹೊರವಲಯದಲ್ಲಿ ಗೌರವಿಸಿ ಸಂಭ್ರ ಮದಿಂದ ಸ್ವಾಗತಿಸಲು ಸಿದ್ಧವಾಯಿತು.

ಕಲ್ಯಾಣವನ್ನು ಸಮೀಪಿಸಿದಂತೆ ಮಾರಯ್ಯ–ಮಹಾದೇವಿಯರ ಆತು ರಕ್ಕೆ ಆಪ್ಯಾಯನವಾದಂತಾಗಿ ಚಿತ್ತದಲ್ಲಿ ಪ್ರಸನ್ನತೆ ತಲೆದೋರಿತ್ತು. ಅವರು ಈಗ ಲೀಲಾಮಯವಾಗಿ ಪ್ರಯಾಣಮಾಡುತ್ತಿದ್ದರು. ಪ್ರಶಾಂತ ಸ್ಥಳವಿದ್ದರೆ ಕಾಯಕ–ದಾಸೋಹಗಳನ್ನು ನಡಿಸುತ್ತ ಒಂದೆರಡುದಿನ ನಿಂತು ಬಿಡುತ್ತಿ ದ್ದರು. ಅದರಿಂದ ಕನ್ನಡನಾಡಿನಲ್ಲಿ ಬಂದಬಳಿಕ ಹಲವು ಗುಂಪಿನವರು ಅವ ರನ್ನು ಹಿಂದೆ ಬಿಟ್ಟು ಮುಂದೆ ಕಲ್ಯಾಣದ ಕಡೆಗೆ ಹೋಗಿ ಬಿಟ್ಟಿದ್ದರು. ಮಾರ ಯ್ಯನವರ ಕೊನೆಕೊನೆಯ ಈ ಪ್ರಯಾಣದ ರೀತಿಯು ಅವರಿಗೆ ಕನ್ನಡ ನಾಡಿನ ಜನಜೀವನದ ಪರಿಚಯವನ್ನೂ ಕನ್ನಡ ಭಾಷೆಯ ವಿವಿಧ ಮುಖ ಗಳ ಅಭ್ಯಾಸವನ್ನೂ ಒದಗಿಸಿತ್ತು. ಸುಭಿಕ್ಷ ಪ್ರದೇಶ; ದೊಡ್ಡ ಮನಸ್ಸಿನ ಜನ; ಮೋಳಿಗೆಯ ಕಾಯಕಕ್ಕೆ ಆತಂಕವಿಲ್ಲ. ಅದರಿಂದ ದಾಸೋಹದ

ಸಾಮಗ್ರಿ ಸಹಜಸಿದ್ಧ; ಗುಡಿ ಗುಂಡಾರಗಳ ಆಶ್ರಯವೂ ಹೊಂಡಭಾವಿಗಳ ತಿಳಿನೀರಿನ ಸೌಕರ್ಯವೂ ಬೇಕಾದಷ್ಟಿದ್ದವು. ತತ್ವಜಿಜ್ಞಾಸುಗಳ ಜ್ಞಾನಿಗಳ ಸಂಗವೂ ಸಿಕ್ಕದಿರುತ್ತಿರಲಿಲ್ಲ ಇವರ ಸ್ವಾವಲಂಬನೆಯ ಧಾರ್ಮಿಕಜೀವನವನ್ನು ಅಲ್ಲಲ್ಲಿಯ ಜನರು ತುಂಬಾ ಗೌರವದಿಂದ ಕಂಡು ಆದರಿಸುತ್ತಿದ್ದರು. ಇಂತಹ ಪರಿಸರದ ನಡುವೆ ನೆಲಸಿದ ಕಲ್ಯಾಣ ನಗರವನ್ನು ಈ ದಂಪತಿಗಳು ತಮ್ಮ ಕಲ್ಪನೆಯಲ್ಲಿ ಅದೆಂತಹ ದಿವ್ಯಭವ್ಯ ನಗರವನ್ನಾಗಿ ಅದೆಂತಹ ಪವಿತ್ರಧರ್ಮಸ್ಥಳವನ್ನಾಗಿ ಕಟ್ಟುತ್ತಿರಬೇಕೆಂಬದನ್ನು ಅವರಂತಹ ಹೃದಯುದವರೇ ಬಲ್ಲರು.

ಕಡೆಗೆ ಕಲ್ಯಾಣದ ಸಮೀಪದ ಬನದಲ್ಲಿ ಮಧ್ಯಾಹ್ನದ ಪೂಜಾಪ್ರಸಾದಕ್ಕಾಗಿ ಅವರು ತಂಗಿರುವದು ಗೊತ್ತಾದಕೂಡಲೆ ನಿಜಲಿಂಗ ಚಿಕ್ಕಯ್ಯ ತಾನೊಬ್ಬನೆ ಅಲ್ಲಿಗೆ ಓಡಿ ಬಂದನು.

ಮಾರಯ್ಯ ಪೂರ್ವಾಶ್ರಯದ ತನ್ನ ಒಡೆಯ; ಆ ಒಡೆಯನ ಆಜ್ಞೆ ಮೀರಿದ ಅಳುಕು ಒಂದು ಕಡೆ; ಆ ಆಜ್ಞೆಯೇ ತನಗೆ ನಿಜ ಸುಖದಸಾಧನೆಯ ಮಾರ್ಗಕ್ಕೆ ಹಚ್ಚಿದ ಕೃತಜ್ಞತೆ ಇನ್ನೊಂದು ಕಡೆ. ತನ್ನ ಬಗೆಗೆ ಅವರು ಯಾವ ಭಾವನೆಯನ್ನೇ ತಾಳಿರಲಿ, ಅಂದಿನ ಮಾನವ ರಾಜರಾಣಿಯರು ಇಂದು ದೇವಮಾನವರಾಗಿ ದೇವ–ದೇವತೆಯರಾಗಿ ಬಂದಿದ್ದಾರೆ. ಅವರಿಗೆ ತನ್ನ ಅಂತರಂಗವನ್ನು ಅರ್ಪಿಸುವದು ಮೊದಲಕೆಲಸವಾಗಿತ್ತು ಅವನಿಗೆ.

ಪ್ರಸಾದ ಸೇವಿಸಿ ಮರದಡಿಯಲ್ಲಿ ಮಾರಯ್ಯ–ಮಹಾದೇವಿಯವರು ಆನಂದದಿಂದ ಕುಳಿತಿದ್ದರು. ಆಗ ತಟ್ಟನೆ ತಮ್ಮ ಮುಂದೆ ಬಂದು ನಿಂತ ಶಿವಲಾಂಛನಧಾರಿ ಶರಣನೊಬ್ಬನು ತಮ್ಮಡಿಗಳಿಗೆ ಎರಗುತ್ತಾನೆ. ಮಾರಯ್ಯ ಚಕಿತನಾಗಿ ನೋಡುತ್ತಾನೆ. ಕ್ಷಣಹೊತ್ತು ದಿಟ್ಟಿಸಿನೋಡಿ ಗುರ್ತಿಸುತ್ತಾನೆ:

'ಓ' ನಿಜಲಿಂಗ. ನಿಜಲಿಂಗ ಶಂದೆ. ನಮ್ಮಗಳ ಹೃದಯಕ್ಕೆ ಬೆಳಕಿನ ಬಾಗಿಲ ತೆರೆದಿಟ್ಟುಕೊಟ್ಟ ಮಹಾನುಭಾವ! ನೀನು ವಂದನಾರ್ಹನು! ನಾವಲ್ಲ!'

ಎನ್ನುತ್ತ ಎದ್ದು ಅವನ ಪಾದಕ್ಕೆ ಪೊಡಮಡಲು ಯತ್ನಿಸುತ್ತಿದ್ದನು. ಅವರ ಈ ಪರಸ್ಪರ ಪೂಜ್ಯಭಾವನೆ ಒಬ್ಬರನೊಬ್ಬರು ಅಪ್ಪಿಕೊಳ್ಳುವಂತೆ ಮಾಡಿತು. ಈ ಏಕಾನಂದಕ್ಕೆ ಕೈಮುಗಿದು ತಲೆಬಾಗಿ ನಿಂತಿದ್ದಳು ಮಹಾದೇವಿಯಮ್ಮ!

ಕಿರೀಟಧರಿಸಿ ಸಿಂಹಾಸನದಲ್ಲಿ ಕುಳಿತು ಆಜ್ಞೆಮಾಡುವ ಮಹಾದೇವ ಭೂಪಾಲನಾಗಲಿ, ತನ್ನ ರಕ್ಷಣೆಯಲ್ಲಿ ದೇವಾಲಯಕ್ಕೆ ಬಂದು, ಮುಸುಕಿನ ಗಾಡಿಯ ಹಿಂಬದಿಯಲ್ಲಿ ಚೆಲುವ ಮೆಲ್ಲಡಿಗಳನ್ನು ಮುಂದೆ ಚಾಚಿ ದಾಸಿಯ ತೋಳಾಶ್ರಯದಲ್ಲಿ ಮೆಲ್ಲಗೆ ಕೆಳಗಿಳಿಯುವ ರಾಣಿಗಂಗಾದೇವಿಯಾಗಲಿ ನಿಜ ಲಿಂಗ ಚಿಕ್ಕಯ್ಯನ ಸ್ಮರಣೆಯಲ್ಲಿ ಆಗ ಉಳಿದಿರಲೇ ಇಲ್ಲ. ಅದರಂತೆ ವೀರಕಾಶಿ ಉದ್ಧಂಗಿ ತೊಟ್ಟು, ಬಾಹುರಕ್ಷೆಬಿಗಿದು, ಟೊಪ್ಪಗಹಾಕಿ, ಕಠಾರಿಹಿಡಿದ ನಿಜ ಲಿಂಗನ ಮೂರ್ತಿಯೂ ಅವರಿಬ್ಬರ ಸ್ಮರಣೆಯಿಂದ ಹಾರಿಹೋಗಿತ್ತು. ಅಂತ ರಂಗದ ಬೆಳಕನ್ನೇ ಪರಸ್ಪರಲ್ಲಿ ಕಂಡು ಕೆಲವು ನಿಮಿಷ ಏಕಾತ್ಮತೆಯನ್ನು ಅನುಭವಿಸಿ ಪ್ರಕೃತಕ್ಕೆ ಬಂದರು. ಮೂವರ ಕಣ್ಣಲ್ಲಿಯೂ ನೀರೂರಿತ್ತು.

"ಕಲ್ಯಾಣ ಸಮೀಪವಷ್ಟೇ ಚಿಕ್ಕಯ್ಯ ?"

"ಮುಂದಿನ ಏರಿಗೆ ಹೋದರೆ ಅಲ್ಲಿಂದ ನಗರದ ಹೊರವಲಯಕ್ಕೇ ಇಳಿಯುವದು ಅಯ್ಯನವರೇ! ತಮ್ಮನ್ನು ಸತ್ಕರಿಸಿ ಸ್ವಾಗತಿಸಿ ನಗರದಲ್ಲಿ ಬಿಜಯಂಗೈಸಿಕೊಳ್ಳಲು ಶರಣ ಸಂದೋಹ ನಗರದ ಹೊರವಲಯಕ್ಕೆ ಬರಲಿದೆ. ನಾನು ಬರುವಾಗ ಸಿದ್ಧವಾಗುತ್ತಿದ್ದರು."

"ಅಯ್ಯಾ ನಮಗೇಕೆ ಸ್ವಾಗತ ಸತ್ಕಾರ? ಮಹಾಮನೆಯಲ್ಲಿ ಅವರೆಲ್ಲರ ಪಾದಧೂಳಿಯನ್ನು ತಳೆದು ನಾವು ಧನ್ಯರಾಗಬೇಕು."

"ಬೇರೆದಾರಿಯಿಂದ ನೇರವಾಗಿ ಮಹಮನೆಗೆ ಹೋಗಿ ಬಸವಣ್ಣನವರನ್ನು ಮೊದಲು ಕಾಣುವದು ಸಾಧ್ಯವಾಗದೇ ಅಣ್ಣಾ?"

ಮಹಾದೇವಿಯಮ್ಮ ತಲೆಯೆತ್ತಿ ಕೇಳಿದಳು.

"ಸ್ವತಃ ಬಸವಣ್ಣನವರೇ ಶರಣ ಸಂದೋಹವನ್ನು ಮುಂದೆಮಾಡಿ ಕೊಂಡು ಬಿಜಯಂಗೈಸಿಕೊಳ್ಳಲು ಬರುತ್ತಾರೆ. ತಾಯೀ! ಮಹಮನೆಯ ತಾಯಿಗಳೂ ಬರುತ್ತಾರೆ."

"ಶಿವಶಿವಾ, ಹೊರಲಾರದ ಹೊರೆ ಹೊರಿಸುತ್ತಾನಲ್ಲ ಬಸವಣ್ಣ! ನಿಷ್ಕಲಂಕ ಮಲ್ಲಿಕಾರ್ಜುನನೇ ಕಾಪಾಡಬೇಕು. ಚಿಕ್ಕಯ್ಯನವರೇ!"

ದುಗುಡದಿಂದ ನುಡಿದ ಮಾರಯ್ಯನಿಗೆ ನಿಜಲಿಂಗ ಚಿಕ್ಕಯ್ಯನ ಉತ್ತರವಿದು:

" ಅಯ್ಯನವರೇ ಬೆಳಕುಬೆಳಕು ಜೆಪಿದಲ್ಲಿ ಭಾರವೆಲ್ಲಿ ಬಂದೀತು ? ಇನ್ನು ದಯಮಾಡಿಸಬಹುದಷ್ಟೇ ? "

" ಆಗಲಯ್ಯಾ "

ಮಾರಯ್ಯನ ಕೈಯೊಳಗಿನ ಕಂಬಳಿಕೊಡಲಿಗಳನ್ನಾಗಲಿ ಮಹಾದೇವಿಯಮ್ಮನ ಕಂಕುಳಲ್ಲಿಯ ಮಡಕೆಯ ಗಂಟನ್ನಾಗಲಿ ತಾನು ಹಿಡಿದುಕೊಳ್ಳಲು ಯತ್ನಿಸಿ ನಿಜಲಿಂಗಚಿಕ್ಕಯ್ಯ ವಿಫಲನಾದನು. ಸತ್ಯ ಕಾಯಕದ ವೀರ ದಾಸೋಹದ ಸಂಕೇತವಾಗಿದ್ದ ಆ ಒಡವೆಗಳನ್ನು ಅವರು ತಾವೇ ಹಿಡಿದುಕೊಂಡು ಹೊರಟರು.

## ೯. ತೊರೆ ತರಂಗಿಣಿಯು ಸೇರಿತು

ಏರುದಾರಿಯಲ್ಲಿ ನಡೆದು ಮುಂದೆ ಬಂದಂತೆ, ಮಹಾಸಾಗರದಂತೆ ವಿಶಾಲವಾದ ಕಲ್ಯಾಣನಗರ ಎದುರಿಗೆ ಕಂಗೊಳಿಸಿತು. ಶರಣದಂಪತಿಗಳು ಆ ಸುಂದರವಾದ ನಗರವನ್ನು ಕಣ್ಣಾರಳಿಸಿ ನೋಡುತ್ತಿದ್ದಂತೆ. ಅದರಂತ ರಂಗದ ಶಿವನಪ್ರಕಾಶವನ್ನು ಅವರ ಸದ್ಭಾವದೃಷ್ಟಿ ನೋಡಿ ನಲಿಯುತ್ತಿತ್ತು. ಅವರ ಹೃದಯ-ಮನಸ್ಸು-ಮುಖಗಳು ಅಗಲವಾಗಿದ್ದವು; ತನು ಪುಳುಕ ಗೊಳ್ಳುತ್ತಿದ್ದವು. ಸಾಗರವ ಸೇರಲು ಬಂದ ಹೊಳೆ ಹತ್ತಿರಕ್ಕೆ ಬಂದಾಗ ಅದರ ಒಡಲು ಅಗಲವಾಗುವದಿಲ್ಲವೇ ? ಅವರು ಅಲ್ಲಲ್ಲಿಗೆ ನಿಂತು ಅ ಪುಣ್ಯನಗರಿಗೆ ಕೈಮುಗಿದು ಮುಂದೆ ಅಡಿ ಇಡುತ್ತಿದ್ದರು.

ಪುರದ ಅಂಚಿನಲ್ಲಿ ಈ ಹೆದ್ದಾರಿಯ ಒಂದು ಬದಿಯಲ್ಲಿ ಹಿರಿಯ ಆಲದ ಮರ, ಒಂದು ಚಿಕ್ಕಕೊಳ ಇದ್ದವು. ಇನ್ನೊಂದು ಬದಿಯಲ್ಲಿ ಬಿಲ್ವವನವಿತು. ಆ ಸ್ಥಳದಲ್ಲಿ ಬಸವಣ್ಣನವರು ಶರಣ – ಶರಣೆಯರ ಸಮುದಾಯದೊಡನೆ ಬಂದು ಕಾದಿದ್ದರು. ವೈರಾಗ್ಯವೀರನ ದರ್ಶನದ ಕುತೂಹಲದಿಂದ ಅಗಣಿತ ನಾಗರಿಕರೂ ಅಲ್ಲಿ ಬಂದು ನೆರೆದಿದ್ದರು.

ನಿಜಲಿಂಗ ಚಿಕ್ಕಯ್ಯನ ಹಿಂದುಗಡೆಯಲ್ಲಿ ಬರುತ್ತಿದ್ದ ಮಾರಯ್ಯ ಮಹಾ ದೇವಿಯಮ್ಮನವರನ್ನು ಕಂಡೊಡನೆ ಶರಣರು ಉಘೇ ಉಘೇ ಎಂದು ಉಗ್ಗ ಡಿಸಿದರು. ಆ ಶರಣ ದಂಪತಿಗಳು ತಮ್ಮ ಭಾವಲೋಕದಲ್ಲಿ ವಿರಾಜಮಾ ನನಾಗಿದ್ದ ಬಸವಣ್ಣನನ್ನು ಅಲ್ಲಿ ಪ್ರತ್ಯಕ್ಷವಾಗಿ ಕಂಡರು. ಅವರೀರ್ವರು ಮಹಿಗೆ ಮೈಯಿಕ್ಕಿ ಆ ನೆರೆದ ಶಿವಗಣಕ್ಕೆ ಆ ಅವಿಮುಕ್ತ ಕ್ಷೇತ್ರಕ್ಕೆ ಭಕ್ತಿಯ ವಂದನೆಗಳನ್ನು ಸಲ್ಲಿಸಿದರು. ಶರಣರ ಶ್ರೀಪಾದಕ್ಕೆ ಹೆದ್ದೊರೆಯಾಗಿ ಹರಿ ದಿತ್ತು ಮೋಳಿಗೆ ದಂಪತಿಗಳ ಸದುಹೃದಯ !

ಬಸವೇಶ-ಗಂಗಾಂಬೆಯರು ಹತ್ತು ಹೆಜ್ಜೆ ಮುಂದೆ ಬಂದು ಎಬ್ಬಿಸಿ ಕ್ರಮ ವಾಗಿ ಅವರಿಬ್ಬರ ಪಾದಗಳನ್ನು ತೊಳೆಯಲು ಅನುವಾದರು. ಅವರು ಪಾದ ಗಳನ್ನು ಕೊಡಲೊಲ್ಲರು, ಇವರು ಬಿಡಲೊಲ್ಲರು; ಸದ್ವಸ್ತುಗಳ ಸಂಸ್ಪರ್ಶನ

ಸುತ್ತು ನಿಂತವರಿಗೆ ಸಂತಸಕ್ಕೆ ಕಾರಣ. ಅಂತು ಹೆಣಗಾಡಿ ಪಾದಗಳನ್ನು ತೊಳೆದು ಭಸ್ಮಧರಿಸಿ, ಹೂಮಾಲೆ ಹಾಕಿದರು. ನೀಲಲೋಚನೆ ಬಂದು ಆರತಿ ಬೆಳಗಿದಳು. ಆಗ ಜಯಘೋಷ ಉಗ್ಗಡಣೆ ಕರತಾಡನಗಳಿಂದ ಕಿವಿ ಗಡಚಿಕ್ಕುವಂತಾದವು. ಹಿರಿಯ ಶರಣರು ಶರಣುಮಾಡುತ್ತಾ ಮುಂದೆ ಬರಲು ಪ್ರತಿಶರಣು ಹೇಳುತ್ತ ಮಾರಯ್ಯ ಆ ಗುಂಪಿನಲ್ಲಿ ಸೇರಿಬಿಟ್ಟ. ಇತ್ತ ನಾಗಲಾಂಬೆ ಬಂದು ಮಹಾದೇವಿಯಮ್ಮನನ್ನು ಆಲಿಂಗಿಸಿ ಶರಣೆಯರ ಗುಂಪಿನಲ್ಲಿ ಕರೆದೊಯ್ದಳು. ಈ ಶರಣದಂಪತಿಗಳು ಶರಣ ಸಂದೋಹವನ್ನು ಪ್ರವೇಶಿಸಿದ್ದು ನಿಜಭಕ್ತಿ ನಿಜಾನಂದವನ್ನು ಪ್ರವೇಶಿಸಿದಂತಾಗಿತ್ತು. ಆಗ ಆನಂದ ತಾನೇತಾನಾಗಿ ತುಂಬಿಕೊಂಡಿತ್ತು. ದರ್ಶನಾಕಾಂಕ್ಷೆಯ ಭರ ಇಳಿದಾಗ ಬಸವೇಶ ಮುಂದೆಬಂದು ಮಾರಯ್ಯನವರ ಕೈಹಿಡಿದು ಮಾರ್ಗಕ್ರಮಣದಲ್ಲಿಯ ಕುಶಲವನ್ನು ವಿಚಾರಿಸಿದರು. ಮನೋನಿರ್ಧಾರದ ಬಲವಿರುವಾಗ ದೇಹದಾಯಾಸ ತಲೆ ಹಾಕಲೇ ಇಲ್ಲವೆಂಬದನ್ನು ತಿಳಿದ ಶರಣರು ಮಾರಯ್ಯನವರ ಹಾಗು ಆ ತಾಯಿಯ ಬಗೆಗೆ ಘನವಾದ ಗೌರವ ತಾಳಿದರು.

ಬಸವಣ್ಣನವರು ಸರ್ವರೊಡನೆ ಅವರನ್ನು ನಗರದಲ್ಲಿ ಬಿಜಯಂಗೈಸಿಕೊಂಡು ಬಂದು ತ್ರಿಪುರಾಂತಕೇಶ್ವರ ದೇವಾಲಯದ ತಾತ್ಕಾಲಿಕ ತಂಗುಮನೆಗೆ ತಲುಪಿಸಿದರು. ಅಂದು ಸಂಜೆಗೆ ಅನುಭವಗೋಷ್ಠಿಯ ವೇಳೆಗೆ ಅದರ ಕಾರ್ಯದರ್ಶಿಯು ಬಂದು ಮಾರಯ್ಯ–ಮಹಾದೇವಿಯಮ್ಮನವರನ್ನು ಮಹಾಮನೆಗೆ ಕರೆದುಕೊಂಡು ಹೋದನು.

ಸ್ವಾವಲಂಬಿಗಳಾದ ಈ ಶರಣ ದಂಪತಿಗಳು ಕಲ್ಯಾಣದಲ್ಲಿ ಹೇಗೆ ನೆಲೆಯಾದರೆಂಬದನ್ನು ಮೊದಲು ತಿಳಿದುಕೊಂಡು ಬಳಿಕ ಅವರ ಅನುಭಾವ ಜೀವನವನ್ನು ಅರಿತುಕೊಳ್ಳೋಣ.

ಎರಡು ದಿವಸ ಮಹಮನೆಯ ಪೂಜಾ ಪ್ರಸಾದಗಳಿಗೆ ಕರೆಬಂದಿತು. ಆದರೆ ಮಾರಯ್ಯ ಮಹಾದೇವಿಯವರಿಗೆ ಕಾಯಕ ಮಾಡಿ ದಾಸೋಹ ನಡಿಸದೆ ಮನಕ್ಕೆ ನೆಮ್ಮದಿಯುಂಟಾಗುವಂತಿರಲಿಲ್ಲ. ನಗರದ ಹೊರವಲಯದಲ್ಲಿ ನೈಋತ್ಯದ ಹೆದ್ವಾರಿಯ ಮಗ್ಗಲಿಗೆ ಒಂದು ಶುಚಿಯಾದ ಸ್ಥಳನೋಡಿಕೊಂಡರು. ಸಮೀಪದಲ್ಲಿ ಶಿವನ ಪ್ರಸಾದ ಅರಣ್ಯ! ಬಾಹುಬಲ ದ್ಯೋತಕವಾದ ಕೊಡಲಿ ಕೈಯಲ್ಲಿ! ಮೂರನೆಯದಿನ ಅಲ್ಲಿ ಚಿಕ್ಕ ಗುಡಿಸಲು ನಿರ್ಮಿಸಿ ಅಂದೇ ಸಂಜೆಗೆ ತಮ್ಮ ಬೀಡಾರವನ್ನು ಅಲ್ಲಿಗೆ ತಂದು ಬಿಟ್ಟರು. ಮುಂದೆ

ಬೇಗನೆ ಆ ಸ್ಥಳದಲ್ಲಿ ಪೂಜೆ-ಅಡಿಗೆ-ದಾಸೋಹ ಕಾರ್ಯಗಳಿಗೆ ತಕ್ಕಷ್ಟು ದೊಡ್ಡ ಚಪ್ಪರದ ಗುಡಿಸಲನ್ನು ಕಟ್ಟಿಕೊಂಡರು. ವಿರಾಮಕ್ಕೆ ಅಂಗಳವಿತ್ತು. ಅಂಚಿನಲ್ಲಿ ಹೂ ಗಿಡಗಳನ್ನು ಹಚ್ಚಿದರು. ಬಿಲ್ವಸಸಿಗಳನ್ನು ನೆಟ್ಟರು. ಹೀಗೆ ಅಲ್ಲಿ ಆರಂಭವಾದ ಈ ಶರಣದಂಪತಿಗಳ ಶಿವಜೀವನದ ಯೋಗದಿಂದ ಅದೊಂದು ಪವಿತ್ರ ಕುಟೀರವಾಯಿತು.

ಕುಟೀರದ ಎಡಗಡೆಗೆ-ಎದುರುಗಡೆಗೆ ಸಾಮಾನ್ಯ ಸರಳ ಶ್ರಮಜೀವಿಗಳ ಓಣಿಗಳಿದ್ದವು. ಆ ಜನರು ತಮ್ಮ ಸಹಜಸ್ವಭಾವದಂತೆ ಇವರ ಹೊಸ ನೀತಿಗೆ ತುಂಬ ಸಹಾಯ ಮಾಡಿದರು. ಬರಬರುತ್ತ ಈ ಶರಣರ ಜೀವನದ ಸತ್ಯಶುದ್ಧನಡತೆ, ದಯಾಪರತೆ, ಅತಿಥಿಸತ್ಕಾರಗಳನ್ನು ಪ್ರತ್ಯಕ್ಷವಾಗಿ ಕಂಡು ಅರಿತಂತೆ ಇವರನ್ನು ತಮ್ಮ ನಡುವೆ ನೆಲಿಸಬಂದ ಮಹಾತ್ಮರೆಂದು ಆದರಿಸಿ ಗೌರವಿಸಹತ್ತಿದರು. ಅವರೊಡನೆ ಸಂಗ-ಸಂಭಾಷಣೆಗಳನ್ನು ನಡಿಸಿ ತಮ್ಮ ವಿವಿಧ ದುಃಖಸಂಕಟಗಳನ್ನು ನೀಗಿಕೊಳ್ಳಹತ್ತಿದರು. ಮೋಳಿಗೆ ದಂಪತಿಗಳು ಅವರನ್ನು ಬಂಧುಗಳಂತೆ ಭಾವಿಸಿ ಪ್ರೀತಿಸುತ್ತಿದ್ದರು.

ಬೆಳಗಿಗೆ ಮೊದಲು ಬೇಗನೆ ಎದ್ದು ಸತಿಪತಿಗಳು ಶುಚಿರ್ಭೂತರಾಗಿ ಶಿವಸ್ತೋತ್ರ ಗೈದ ಬಳಿಕ ಮಾರಯ್ಯ ಅಡವಿಗೆ ನಡೆಯುವರು. ಮಹಾದೇವಿ ಆಶ್ರಮ ಓರಣಗೊಳಿಸಿ ಸ್ನಾನಶಿವಾರ್ಚನೆಗೈದು ಅಡಿಗೆ ಮಾಡುವಳು. ಅಷ್ಟರಲ್ಲಿ ಬಂದ ಮಾರಯ್ಯನೂ ಮೋಳಿಗೆಯನ್ನು ಚಲ್ಲಿ ಸ್ನಾನ ಪೂಜೆ ಮಾಡುವನು. ಬಳಿಕ ಅವರಿಬ್ಬರು ಒಂದಾಗಿ ಜಂಗಮಾರಾಧನೆ ನಡಿಸಿ ಪಾದೋದಕ-ಪ್ರಸಾದ ಸ್ವೀಕರಿಸುವರು. ಒಮ್ಮೊಮ್ಮೆ ಮಾರಯ್ಯ ಬರುವದಕ್ಕೆ ತಡವಾದರೆ-ಜಂಗಮ ಮೂರ್ತಿಗಳು ಬೇಗ ದಯಮಾಡಿಸಿದರೆ-ಮಹಾದೇವಿಯೇ ಜಂಗಮಾರಾಧನೆ ನಡಿಸಿ, ತೀರ್ಥ-ಪ್ರಸಾದ ಕಾದಿರಿಸಿ, ಪತಿಯಾಗಮನದ ನಂತರ ಉಭಯತರು ಸೇವಿಸಿ ಪ್ರಸನ್ನತೆ ಪಡೆಯುತ್ತಿದ್ದರು. ಅಪರಾಹ್ನದಲ್ಲಿ ಆಧ್ಯಾತ್ಮಿಕ ವಿಷಯಗಳ ಚರ್ಚೆ. ಹಿಂದಿನ ದಿನ ಅನುಭವಗೋಷ್ಠಿಯಲ್ಲಿ ಮನಕ್ಕೆ ಮುಟ್ಟಿದ ಮಾತುಗಳನ್ನು ಮನನ ಮಾಡಿಕೊಳ್ಳುತ್ತಿದ್ದರು. ತೆರಹಿಲ್ಲದ ಆನಂದದಲ್ಲಿ ಬೆರೆಯುತ್ತಿದ್ದರು. ಅಷ್ಟರಲ್ಲಿ ಭಕ್ತಿ-ನೀತಿಗಳ ಒಳ್ಳೆಯ ಮಾತು ಕೇಳಲು ಕುತೂಹಲದಿಂದ ಬರುವ ನೆರೆಯ ಜಿಜ್ಞಾಸುಗಳೊಡನೆ ಮಮತೆಯಿಂದ ಮಾತನಾಡಿ ಅವರ ಮನಕ್ಕೆ ತೃಪ್ತಿಯನ್ನುಂಟುಮಾಡುವರು. ಬೇಗಿನ ಹೊತ್ತಿಗೆ ಮಾರಯ್ಯ ಕಟ್ಟಿಗೆ ಹೊರೆಹೊತ್ತು ಪೇಟೆಗೆ ಹೋಗುವನು. ಅದನ್ನು ಮಾರಿ ಮರುದಿನದ ಪ್ರಸಾದಕ್ಕೆ ಸಾಮಗ್ರಿ ತರುವನು. ಅಷ್ಟರಲ್ಲಿ

ಶರಣೆ ಮನೆಯ ಕೆಲಸ ಮಾಡಿಕೊಳ್ಳುವಳು. ಬಳಿಕ ಇಬ್ಬರೂ ಭಸ್ಮಭೂಷಿತರಾಗಿ ಅನುಭವಗೋಷ್ಠಿಗಾಗಿ ಮಹಮನೆಗೆ ತೆರಳುವರು. ಇದು ಅವರ ಸಾಮಾನ್ಯ ದಿನಚರಿಯಾಯಿತು. ಸತ್ಯಕಾಯಕ, ನಿತ್ಯದಾಸೋಹ!

ಇವರು ಕಲ್ಯಾಣಕ್ಕೆ ಬಂದ ಮೊದಲದಿನ ಅನುಭವಗೋಷ್ಠಿಯಲ್ಲಿ ಶರಣಸಮುದಾಯ ಇವರಿಗೆ ಪ್ರೇಮದ ಪರಾಮರಿಕೆ ನೀಡಿತು. ಸಾಮಾನ್ಯರಿಗಿಂತ ಹೆಚ್ಚಾಗಿದ್ದ ಲೌಕಿಕ ಸಂಪತ್ತಿನ ಸಮಗ್ರ ಹಂಗನ್ನು ಹರಿದು ನಿಂತ ಇವರ ಆತ್ಮತೇಜಸ್ಸನ್ನು ತುಂಬಾ ಗೌರವಿಸಿದರು. ಇವರ ಅನುಭವಾಮೃತ ವಾಣಿಯನ್ನು ಕೇಳಲು ಆತುರರಾಗಿದ್ದರು. ಆದರೆ ಜ್ಞಾನತೃಷೆಯುಳ್ಳ ಮಾರಯ್ಯನವರಿಗೆ ಜ್ಞಾನಬೋಧೆಯ ಆತುರವೆಲ್ಲಿಂದ ಬರಬೇಕು? ಇದಲ್ಲದೆ ಅರಿತುದನ್ನು ಅರುಹುವದಕ್ಕೂ ಅವರಿಗೆ ಕನ್ನಡ ಭಾಷಾಶಕ್ತಿ ಇನ್ನೂ ಬಂದಿರದು. ಆದ್ದರಿಂದ ಅವರು ವಿನಯವನ್ನೇ ಪ್ರಕಟಿಸುತ್ತ ಹಲವು ದಿವಸ ಮೌನ ಮುದ್ರೆಯನ್ನೇ ಧರಿಸಿಬಿಟ್ಟಿದ್ದರು.

ಹಾಗೆಯೇ ಶರಣೆಯರ ಗುಂಪಿನಲ್ಲಿ ಮಹಾದೇವಿಯವರ ವ್ಯಕ್ತಿತ್ವಕ್ಕೆ ಪೂಜ್ಯಭಾವನೆ ವ್ಯಕ್ತವಾಗಿತ್ತು. ಲೋಕದಲ್ಲಿ ಸಿರಿ ಸಂಪತ್ತುಗಳಲ್ಲಿ ಹೆಚ್ಚು ಮೋಹ ಸ್ತ್ರೀಯರಿಗೆ ಸಹಜಗುಣ. ಆಜನ್ಮಲಭ್ಯವಾಗಿದ್ದ ಸಂಪದ್ಭೋಗಗಳ ಬಂಧನವನ್ನು ಸುಲಭವಾಗಿ ಕಳಚಿದ ಅವರ ತೀಕ್ಷ್ಣ ವಿರಕ್ತಿಯನ್ನು ಲಿಂಗನಿಷ್ಠೆ, ಪತಿಭಕ್ತಿಪರಾಯಣತೆಗಳನ್ನು ಸೇವಾಬುದ್ಧಿಯನ್ನು ಮನದಂದು ಕೊಂಡಾಡಿ ನಾಗಲಾಂಬೆ ಮುಂತಾದ ಹಿರಿಯ ಶರಣೆಯರು ಕೈಮುಗಿಯುತ್ತಿದ್ದರು. ಮಹಾದೇವಿಯಮ್ಮ ಪ್ರತಿಯಾಗಿ ಶರಣುಮಾಡಿ ನುಡಿಯುತ್ತಿದ್ದಳು:

“ತಾಯಿಗಳಿರಾ ನಿಮ್ಮ ಕರದ ಕೂಸು ನಾನು. ಕರುಣೆಯಿರಬೇಕು. ಮಗು ಅಜ್ಞಾನಿಯಾದರೂ ಹೆತ್ತವರ ಪ್ರೀತಿಯಲ್ಲಿ ಬಲು ಬುದ್ಧಿವಂತೆ, ಅಷ್ಟೇ ಅಲ್ಲವೇ ಅವ್ವಗಳಿರಾ ?”

ಮಹಾದೇವಿಯಮ್ಮನಿಗೂ ಶರಣೆಯರ ಮಾತುಗಳಲ್ಲಿ ಸಮರಸಗೊಂಡು ಭಾಗವಹಿಸಲು, ಕನ್ನಡ ನುಡಿಯ ಬೆಡಗು ಇನ್ನೂ ಮೈಗೂಡದಿರುವದು ಆತಂಕವಾಗಿತ್ತು. ಆದರೆ ಈ ಆತಂಕ ಸತಿಪತಿಗಳಿಬ್ಬರಿಗೂ ಬಹುದಿವಸ ಉಳಿಯಲಿಲ್ಲ. ಗೋಷ್ಠಿಯಲ್ಲಿ ಕೇಳಿದ ವಿಚಾರಗಳನ್ನು ಕುಟೀರಕ್ಕೆ ಬಂದು ಅನುಭವದ ಒರೆಗೆ ಹಚ್ಚಿನೋಡುತ್ತಿದ್ದರು. ಆಗ ಅರಿಕೆಯಾಗದೇ ಸಂದು ಸಂಶಯಗಳು ಉಳಿದರೆ ಮಾರನೆಯ ಹಾಗೂ ಮೂರನೆಯ ದಿನಗಳ ಗೋಷ್ಠಿ

ಯಲ್ಲಿ ಆ ಸಂಶಯುಗಳಿಗೆ ಪರಿಹಾರ ದೊರೆಯುವ ನಿರೀಕ್ಷೆಯಲ್ಲಿರುತ್ತಿದ್ದರು. ಇಲ್ಲವೇ ಅನುಭಾವಿಗಳಿಂದ ಅಲ್ಲಿಯೇ ಸಮಾಧಾನ ಪಡೆಯುತ್ತಿದ್ದರು. ಅವರ ಆಧ್ಯಾತ್ಮಿಕ ಆಸಕ್ತಿ ಮೇರೆವರಿದಾಗ, ಪ್ರತಿಭೆ ಒತ್ತರಿಸಿದಾಗ, ಅವಿರತ ಅಭ್ಯಾಸ ಒದಗುತ್ತಿರುವಾಗ ಭಾಷೆಯು ಪರಿಣತೆ ಬಾಡಿರುವದೇ ? ಕನ್ನಡ ದಲ್ಲಿ ಆಳವಾದ ಅನುಭಾವದ ನುಡಿ ಸುಡಿಯುವ ಮತ್ತು ಪ್ರಶ್ನಿಸುವ ಸಾಮರ್ಥ್ಯ ಬಂದು ಬಿಟ್ಟಿತು. ಕನ್ನಡ ಸರಸತಿಯು ಹಸಾದ ಕೈಸೇರಿತು.

ಮಾರಯ್ಯ – ಮಹಾದೇವಿಯರ ಈ ಅಸಾಧಾರಣ ಪಾರಮಾರ್ಥಿಕ ಪ್ರಪಂಚ ಹೀಗೆ ಮುಂದುವರಿಯಿತು. ಅವರು ಷಟ್‌ಸ್ಥಲ ಸಿದ್ಧಾಂತದ ಅನು ಸಂಧಾನದಲ್ಲಿ ನಿಸ್ಸಂಧಿಗ್ಧಕ್ರಿಯಾಚಾರಗಳನ್ನು ಸಾಧಿಸಿ ಸಾಗಿದ್ದರು. ಶಾಂತಿ ಕದಡಿದ ಜೀವಿಗಳನ್ನು ಸಾಂತ್ವನಗೊಳಿಸುವ ಅವರ ಮೃದುಹೃದಯದ ನಡೆ ನುಡಿಗಳು ಅವರ ನೆರೆಯ ಅನುಯಾಯಿಗಳ ಮನಸ್ಸನ್ನು ಸೂರೆಗೊಂಡಿದ್ದವು. ಅವರೆಲ್ಲರೂ ದಿನವೊಂದಕ್ಕೆ ಕೆಲವರಂತೆ ಲಿಂಗದೀಕ್ಷೆಹೊಂದಿ ಶಿವಭಕ್ತರಾಗು ತ್ತಿದ್ದರು. ಅವರೆಲ್ಲರನ್ನು ಮಾರಯ್ಯನವರು ಬಂಧುಗಳು-ಬಾಂಧವರು ಎಂದು ಕರೆಯುತ್ತಿದ್ದರು. ಸುತ್ತಲಿನ ಸದ್ಭಕ್ತರ ಓಣಿಗಳು ಬಾಂಧವರ ಓಣಿಗಳಾ ದವು. ಈ ನೂತನ ಶಿವಭಕ್ತರ ಸಹವಾಸ ಸಂಪರ್ಕಗಳಿಂದ ಮಾರಯ್ಯ ನವರಿಗೆ ಲೋಕಾನುಭಾವವು ಹೆಚ್ಚಿ ಆ ಅಂಶವು ಪ್ರಪಂಚ ಪಾರಮಾರ್ಥಿಕ ಗಳ ಸಮನ್ವಯತತ್ವ ನಿರೂಪಿಸುವದಕ್ಕೂ ಅವರಿಗೆ ಸಹಾಯವಾಯಿತು.

ಮಾರಯ್ಯನವರ ಕಾಯಕ ನಡೆಯುವದು ಅಡವಿಯಲ್ಲಿ; ವಾಸಸ್ಥಳ ನಗರದ ಹೊರವಲಯದಲ್ಲಿ; ಆದರೂ ಬಾಂಧವರ ಓಣಿಯ ಬಂಧುಗಳ ಮಧ್ಯ ದಲ್ಲಿದ್ದಾರೆ. ಉಗ್ರವೈರಾಗ್ಯ ಅವರ ಮನಭಾವಗಳಲ್ಲಿತ್ತು. ಭಕ್ತಿ–ಜ್ಞಾನ– ವೈರಾಗ್ಯಗಳ ಸಾಧನೆಯಲ್ಲಿ ಸತಿಪತಿಗಳು ಜತೆಯಾಗಿ ಸಾಗಿದ್ದರು. ತ್ಯಾಗ– ಸೇವೆಗಳ ಸಾಮಾಜಿಕ ಗುಣಗಳಿಂದ ಸಜ್ಜನಸಮೂಹದಲ್ಲಿ ಬೆರೆತು ನಡೆ ದಿದ್ದರು. ಶರಣರು ವ್ಯಷ್ಟಿಜೀವಿಯೂ ಸಮಷ್ಟಿಜೀವಿಯೂ ಆಗಿರುವದು ಶರಣ ಧರ್ಮದ ವೈಶಿಷ್ಟ್ಯ. ಸಮಾಜದಲ್ಲಿ ಬಾಳಿ ತನ್ನ ಉದ್ಧಾರವನ್ನು ತಾನೇ ಮಾಡಿಕೊಳ್ಳುವದು ಅದರ ರೀತಿ! ಅದಕ್ಕೆ ಹೊಂತಾಗಲು ಮಾರಯ್ಯನವ ರಂತಹ ವೈರಾಗ್ಯಶೀಲರಿಗೂ ಸಾಧ್ಯವಾಗಲಿಲ್ಲ. ಬಾಂಧವರೋಣಿಯ ಭಕ್ತ ರಿಂದ, ಮಾರಯ್ಯ–ಮಹಾದೇವಿಯರು ಶಿವಶಕ್ತಿಯರಾಗಿ, ಗುರುದೇವತೆಗಳಾಗಿ ಭಾವಿಸಲ್ಪಟ್ಟಿದ್ದರು. ನಾಲ್ಕುವರ್ಷ ಸಂದವು. ಶರಣಧರ್ಮದಲ್ಲಿ ಸಮರಸವಾ ದರು ಆ ಸತಿಪತಿಗಳು!

# ೧೦. ಮಹಮನೆಯ ಬೆಳಕು.

ಮಾರಯ್ಯ-ಮಹಾದೇವಿಯವರೀಗ ಶಿವಾನುಭವದ ತತ್ವನೀತಿಗಳ ಬಗೆಗೆ ವಚನಗಳನ್ನು ರಚಿಸಹತ್ತಿದ್ದಾರೆ. ಅವನ್ನು ಅನುಭಾವದ ಸಾಧನೆಗಾಗಿ ಬರೆದಿಡುತ್ತಿದ್ದಾರೆ, ಅನುಭವ ಗೋಷ್ಠಿಯಲ್ಲಿ ಪ್ರತಿಪಾದಿಸುವದಕ್ಕಲ್ಲ. ಅವರ ಈ ಸಾಹಸದ ಸಾಹಿತ್ಯರಚನೆಯ ಸುದ್ದಿ ಜಂಗಮಮೂರ್ತಿಗಳ ಮೂಲಕ ಅನುಭವ ಮಂಟಪಕ್ಕೆ ಮುಟ್ಟಿತು. ಅನುಭವ ಮಂಟಪದ ಸಾಹಿತ್ಯ ಸಮಿತಿಯ ಸದಸ್ಯರು ಅವರ ವಚನಗಳನ್ನು ನೋಡಲು ಆತುರರಾದರು. ಸಮಿತಿಯ ಕಾರ್ಯದರ್ಶಿ ವಚನಭಾಂಡಾರಿ ಶಾಂತಯ್ಯನವರು ಆದಿನ ಬೇಗಿನ ಹೊತ್ತಿನಲ್ಲಿ ಮಾರಯ್ಯನವರ ಕುಟೀರಕ್ಕೆ ಬಂದು, ಶರಣುಮಾಡಿ ಸಾಹಿತ್ಯಸಮಿತಿಯವರ ಬಿನ್ನಪವನ್ನು ಅರುಹಿ 'ತಮ್ಮ ಅನುಭವಾಮೃತದ ವಚನಗಳ ಓಲೆಗಳನ್ನು ದಯಪಾಲಿಸಿರಿ, ಎಂದನು.

"ಆಗಲಿ ಶಾಂತಯ್ಯನವರೇ ಒಡೆಯರ ವಾಣಿ ಒಡೆಯರಿಗೆ ಅರ್ಪಿತ ಒಯ್ಯಿರಿ" ಎಂದು ಮಾರಯ್ಯನವರು ಅದುವರೆಗೆ ಬರೆದಿಟ್ಟ ಓಲೆಗಳನ್ನು ಕೊಟ್ಟುಬಿಟ್ಟರು.

ಮಹಮನೆಯಲ್ಲಿ ಸಮಿತಿಯವರು ಉತ್ಸುಕತೆಯಿಂದ ಅವುಗಳನ್ನು ಪರಿಷ್ಕರಿಸಿ ಅವುಗಳ ಪಾರಮಾರ್ಥಿಕ ಮೌಲ್ಯವನ್ನು ಮೆಚ್ಚಿದರು. ಚೆನ್ನಬಸವಣ್ಣನವರು ಅಂದು ಮಾರಯ್ಯನವರ ವಚನಗಳ ಕಟ್ಟುಕೈಯಲ್ಲಿ ಹಿಡಿದು ಕೆಲವನ್ನು ಪಠಿಸಿ ಪ್ರಸ್ತಾಪ ಮಾಡಿದರು.

" ಬಹಿರಂಗದಲ್ಲಿ ಮಾರಯ್ಯನವರ ಕ್ರಾಂತಿಯುತ ಜೀವನ ಉಜ್ವಲವಾಗಿರುವಂತೆ ಅವರ ಅಂತರಂಗವು ಜ್ಯೋತಿರ್ಮಯವಾಗಿರುವದು. ಅದು ಎಲ್ಲವನ್ನು ಗ್ರಹಿಸಬಲ್ಲುದು; ಎಲ್ಲವನ್ನು ಧರಿಸಬಲ್ಲುದು; ಹಾಗೆಯೇ ಎಲ್ಲವನ್ನು ಬಿತ್ತರಿಸಬಲ್ಲುದು. ಹುಟ್ಟುಗನ್ನಡಿಗರಿಗಿಂತ ಹೆಚ್ಚಾಗಿ ಅವರಿಗೆ ಕನ್ನಡ ನುಡಿ

ಆಳವಟ್ಟಿದೆ. ತಮ್ಮ ಆಧ್ಯಾತ್ಮಿಕ ವಿಚಾರಗಳನ್ನು ಕನ್ನಡ ನುಡಿಯಲ್ಲಿ ಸುಂದರವಾಗಿ ಮೂಡಿಸಬಲ್ಲವರಾಗಿದ್ದಾರೆ. ಈ ಮೊದಲಓಲೆ ಗುರು ನಿಃಕಳಂಕ ಮಲ್ಲಿಕಾರ್ಜುನರಿಗೆ ಅರ್ಪಿಸಿದ ಗೌರವದ ವಚನ.

ಲಿಂಗ ಪ್ರಾಣಿ—ಪ್ರಾಣ ಲಿಂಗವಾದ ನಿರಂಗನಿರವು ಹೇಗಿರ ಬೇಕೆಂದರೆ.
ಉಡಿಯೊಳಗಣ ಮಣಿಸರದಂತೆ, ಧರೆಯೊಳಗಣ ಸುರತರುವಿನಂತೆ
ಕರಿಯೊಳಗಣ ಭರಿಯುಂಟ, ಮಣಿಯೊಳಗಣ ವಿವರದಂತೆ
ಶರಧಿಯೊಳಗಣ ಸಾರದಂತೆ. ಇಂತಲ್ಲದೆ ಭರದಲ್ಲಿ ತಿರುಗುವ ಸುಳುಹಿನಅರೆ
ಬಿರುದಿನವರು ಅಯ್ಯಗಳೇ ?
ಎನ್ನಗುರು ಭವರೋಗವೈದ್ಯ ! ಪರಶಿವಮೂರ್ತಿ.
ಪರಬ್ರಹ್ಮ ಗುರುತಾನೆ, ನಿಃಕಳಂಕ ಮಲ್ಲಿಕಾರ್ಜುನನು.

ನಮ್ಮ ಗೋಷ್ಠಿಯಲ್ಲಿ ಮಾರಯ್ಯನವರು ಮಾತನಾಡುತ್ತಿರುವದಿಲ್ಲ. ತಾವು ಅನುಭಾವಿಗಳೆಂದು ತೋರಗೊಡದಿರುವ ಹಿರಿಮೆ ಅದು. ಆದರೂ ಅವರ ಅಂತರಂಗದ ವಾಣಿಗಳನ್ನು ಈ ಓಲೆಗಳು ನುಡಿಯುತ್ತಿವೆ. ಇದನ್ನು ಕೇಳಿರಿ :

“ ಬಳ್ಳಿಮರನ ಸುತ್ತಿ ಅದು ಸಾಲದೆ ಮತ್ತೊಂದಕ್ಕಲ್ಲಾಡುವಂತೆ
ನಿಲ್ಲದು ಮನಕ್ರಿಯೆಯಲ್ಲಿ; ನಿಲ್ಲದು ಮನ ನಿಶ್ಚಯದಲ್ಲಿ.
ಅಲ್ಲವ ಮೆಲ್ಲಿದ ಕೋಡಗನಂತೆ ಕಲ್ಲಿಯೊಳಗಾದ ಮತ್ಸ್ಯದಂತೆ
ಅಲ್ಲಿಗೆ ಹೊಲಬು ಕಾಣದೆ, ಇಲ್ಲಿಗೆ ನೆಲೆಯ ಕಾಣದೆ. ತಲ್ಲಣಿಸುತ್ತಿದ್ದೇನೆ
ಎನ್ನ ಭಾವದಲ್ಲಿ ನೀನಿರಾ ನಿಃಕಳಂಕ ಮಲ್ಲಿಕಾರ್ಜನಾ.

ಅವರ ಸಾಧಕ ಹೃದಯದ ಚಿತ್ರವಿದು. ನಿಜಸಾಧಕನ ವ್ಯಾಕುಲತೆಯು ದೃಷ್ಟಾಂತದೊಡನೆ ಎಷ್ಟು ಯಥಾರ್ಥವಾಗಿ ನಿರೂಪಿತವಾಗಿದೆ ಕಂಡಿರಾ ! ಇಂತಹ ಕಳವಳದ ಕೊರೆತವೇ ಮನಕ್ಕೆ ಮೆತ್ತಿದ್ದ ಜಿಡ್ಡನ್ನು ಕತ್ತರಿಸಿ ಕತ್ತಲೆಯನ್ನು ಕಳೆದು ಬೆಳಗಬಲ್ಲುದು. ಇಲ್ಲಿ ಮಹಾದೇವಿಯಮ್ಮನವರ ವಚನದ ಓಲೆಯಿದೆ. ಮಾರಯ್ಯನವರ ಉತ್ಕ್ರಾಂತಿ ಜೀವನ ಮಹಾದೇವಿಯಮ್ಮನವರಿಗೆ ಒಡ್ಡಿದ ಒಂದು ದಿವ್ಯ! ಆ ದಿವ್ಯದಲ್ಲಿ ಪರಿಸ್ಫುಟಗೊಂಡು ಬೆಳಗುವ ಅಮ್ಮನವರ ನಿತ್ಯ ತತ್ವದ ನಿಲುವನ್ನು ನೋಡಿರಿ.”

ಶರಣೆಯರು ಮಹಾದೇವಿಯಮ್ಮನವರನ್ನು ಕಣ್ತುಂಬಿ ನೋಡಿದರು. ಅಮ್ಮನವರು ತಲೆಬಾಗಿ ಕುಳಿತಿದ್ದರು. ಶರಣರು ವಚನಪಠಣಕ್ಕೆ ಕಿವಿಕೊಟ್ಟಿದ್ದರು. ಚೆನ್ನಬಸವಣ್ಣನವರು ಪಠಿಸಿದರು:

"ಇಷ್ಟದಲ್ಲಿ ನೋಟ, ಜ್ಞಾನದಲ್ಲಿ ಕೂಟ ಏಕಾರ್ಥವಾದಲ್ಲಿ
ಕಾಯವೆಂಬ ಕದಳಿಯು ಬಿಟ್ಟುದು:
ಭಾವವೆಂಬ ಕುರುಹು ಮರೆದುದು.
ಇಂತೀ ಉಭಯ ನಿರ್ಭಾವವಾದಲ್ಲಿ ಇಹಪರವೆಂಬ ಹೊಲಬು ಕೆಟ್ಟಿತ್ತು
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ"

ಕರತಾಡನ ಮಾಡಿತು ಶರಣಸಂದೋಹ! ಬಳಿಕ ಓಲೆ ತಿರುವುತ್ತ ಚೆನ್ನಬಸವಣ್ಣ 'ಒಂದಕ್ಕಿಂತ ಒಂದು ಉನ್ನತ' ಎನ್ನುತ್ತಿದ್ದರು. ಮಾರಯ್ಯನವರ ಷಟ್‌ಸ್ಥಲ ಮಾರ್ಗದ ನಿಲವ ನಿರೂಪಿಸುವ ವಚನ ಕಣ್ಣಿಗೆ ಬಿದ್ದಾಗ ಷಟ್‌ಸ್ಥಲ ಶಾಸ್ತ್ರಿ ಚೆನ್ನಬಸವಣ್ಣ 'ಹೋ ನೋಡಿ' ಎಂದು ದನಿ ಎತ್ತರಿಸಿ ಅದನ್ನು ಪಠಿಸಿದರು:

'ಕಾಯ ಇಂದ್ರಿಯಗಳ ಮಚ್ಚ ಇಹನ್ನಕ್ಕ ಭಕ್ತಸ್ಥಲವಿಲ್ಲ.
ಆತ್ಮ ಹಲವು ವಿಷಯಗಳಲ್ಲಿ ಹರಿವನ್ನಕ್ಕ ಮಹೇಶ್ವರ ಸ್ಥಲವಿಲ್ಲ.
ಹಿರಿದು ಕಿರಿದನರಿದು ರೋಚಕ ಅರೋಚಕವೆಂಬನ್ನಕ್ಕ ಪ್ರಸಾದಿಸ್ಥಲವಿಲ್ಲ.
ಜಾಗ್ರದಲ್ಲಿ ಕಂಡು,ಸ್ವಪ್ನದಲ್ಲಿ ತೋರಿ ಸುಷುಪ್ತಿಯಲ್ಲಿ ಅಳಿವನ್ನಕ್ಕ
ಪ್ರಾಣಲಿಂಗ ಸಂಬಂಧಿಯಲ್ಲ.
ಚತುರ್ವಿಧ ಫಲಪದಂಗಳಲ್ಲಿ ಕಾಲ ಕಾಣಿಸಿಕೊಳ್ಳನ್ನಕ್ಕ ಶರಣಸ್ಥಲವಿಲ್ಲ.
ಅರಿದೆ ಮರೆದೆನೆಂಬ ಉಭಯದ ಸಂದೇಹವುಳ್ಳನ್ನಕ್ಕ ಐಕ್ಯಸ್ಥಲವಿಲ್ಲ.
ಇಂತೀ ಷಟ್‌ಸ್ಥಲಂಗಳಲ್ಲಿ ಸೋಪಾನದ ಮೆಟ್ಟನಂತೆ
ಒಂದಮೆಟ್ಟಿ ಒಂದನೇರುವನ್ನಕ್ಕ ಸ್ಥಲಕುಳ ಭರಿತನಾಗಿರಬೇಕು.
ಮೇಲೆ ಏರಿ ಕೆಳಗೆ ಇಳಿಯೆನೆಂಬ ಭಾವನಿಂದಲ್ಲಿ ಆರನೆಣಿಸಲಿಲ್ಲ.
ಮೂರೆಂದು ಬೇರೊಂದ ಮುಟ್ಟಲಿಲ್ಲ.
ಕರಗಿದ ಬಂಗಾರಕ್ಕೆ ಕರಚರಣಗಳಿಲ್ಲದಂತೆ
ಆತ ಕುರುಹಡಗಿದ ಷಟ್‌ಸ್ಥಲ ಬ್ರಹ್ಮಿ ನಿಃಕಳಂಕ ಮಲ್ಲಿಕಾರ್ಜುನ."

ಕೊನೆಯ ವಾಕ್ಯ ಕೂಗಿ ಹೇಳಿದಾಗ 'ಉಘೇ ಉಘೇ ಎಂಬ ಧ್ವನಿ ಉಕ್ಕಿ ಬಂದಿತು. ಆಗ ಚೆನ್ನಬಸವಣ್ಣನವರು ಮಾರಯ್ಯನವರನ್ನು ಹೃದಯತುಂಬಿ ಪ್ರಶಂಸಿಸಿ ನುಡಿದರು:

"ಹಸಿವು ತೃಷೆ ವಿಷಯವೆಂಬ ಕರ್ಮಂಗಳನೆ ಕಂಡು
ಪರಿಣಾಮವೆಂಬ ಕೊಡಲಿ ತತ್ತರಿದರಿದು
ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳ

ತರಿದೊಟ್ಟಿದ ನೊಂದೆಡೆಯಲ್ಲಿ.
ಪಂಚೇಂದ್ರಿಯ ಷಡುವರ್ಗ ಸಪ್ತಧಾತು ಅಷ್ಟಮದವೆಂಬ ಬಳ್ಳಿಯ ಸೀಳಿ
ಏಳುಕಟ್ಟಿನ ಮೋಳಿಗೆಯನೆ ಹೊತ್ತು ನಡೆದನಯ್ಯಾ
ಕೂಡಲಚನ್ನಸಂಗಯ್ಯನಲ್ಲಿ ಮೋಳಿಗೆಯ ಮಾರಿತಂದೆಗಳ
ಶ್ರೀಪಾದಕ್ಕೆ ನಮೋ ನಮೋ ಜಯ ಜಯ ಜಯತು.

ಮಾರಯ್ಯನವರ ಮತ್ತು ಅಮ್ಮನವರ ವಚನಗಳ ಪ್ರತಿಮಾಡಿ ಓಲೆಯ ಭಾಂಡಾರಕ್ಕೆ ಸೇರಿಸಬೇಕು ಶಾಂತಯ್ಯನವರೇ! ಆಗಾಗ ಅವರ ಮಠಕ್ಕೆ ಹೋಗಿ ಅವರ ವಚನದೋಲೆಗಳನ್ನು ತರುತ್ತಿರಬೇಕು'' ಎಂದು ಚೆನ್ನಬಸವಣ್ಣ ಕೈಮುಗಿದು ಬಿನ್ನವಿಸಿದಾಗ 'ಹಸಾದ ಆಗಲಿ ಬುದ್ಧೀ' ಎಂದರು ಓಲೆಯ ಶಾಂತಯ್ಯನವರು ವಿನಯದಿಂದ

\+ \+ \+ \+ \+

ಮುಂದೊಂದು ದಿನ ಅಡವಿಯಿಂದ ಬಂದು ಮಾರಯ್ಯನವರು ಮೋಳಿಗೆಯ ಹೊರೆಯನ್ನು ಇನ್ನೂ ಇಡುತ್ತಿದ್ದರು; ಅವರ ದಾರಿಯನ್ನೇ ಕಾದಿದ್ದ ಬಾಂಧವರೋಣಿಯ ಮಹಾಲಿಂಗನು ಓಡಿ ಬಂದು ಹೇಳಿದನು:

“ ಅಯ್ಯನವರೆ, ಮಹಮನೆಯ ಮುಂದೆ ಇಬ್ಬರು ಶಿವಯೋಗಿಗಳು ಬಂದಿದ್ದಾರೆ. ಲಿಂಗಾರ್ಚನೆಯಲ್ಲಿದ್ದ ಬಸವಣ್ಣನವರು ತಾವೇ ಬಾಗಿಲಿಗೆ ಬಂದು ಸ್ವಾಗತಿಸಲಿಕ್ಕಾಗದೆ ಅಪ್ಪಣ್ಣನವರನ್ನು ಕಳಿಸಿದ್ದರಂತೆ! ಅಣ್ಣನವರು ಅಹಂಕಾರಿಗಳೆಂದು ಶಿವಯೋಗಿ ಜರಿದು ನುಡಿದರಂತೆ. ಅದನ್ನು ಕೇಳಿ ಬಸವಣ್ಣನವರು ಪಶ್ಚಾತ್ತಾಪಪಟ್ಟು ಓಡಿಬಂದು ಕ್ಷಮೆ ಕೋರಿದರೂ ಅವರು ಒಳಗೆ ಬರಲೊಲ್ಲರು. ಲಿಂಗತತ್ವ-ಜಂಗಮತತ್ವಗಳ ವಿವೇಚನೆಯೇ ವಾದ ವಿಷಯವಾಗಿದೆ. ಅವರು ಅಲ್ಲಮಪ್ರಭುದೇವರೆಂದೂ ಜತೆಗಿದ್ದವರು ಸೊನ್ನಲಿಗೆಯ ಸಿದ್ಧರಾಮಶಿವಯೋಗಿಯೆಂದೂ ಈಗ ಗೊತ್ತಾಯಿತು ಇದನ್ನು ನಿಮಗೆ ಅರಿಕೆ ಮಾಡಬೇಕೆಂದು ಓಡಿಬಂದು ನಿಂತಿದ್ದೇನೆ. ”

ಮಹಾಲಿಂಗನು ಉಸಿರು ಬಿಡದೆ ಒಂದೇಸವನೆ ಹೇಳಿದುದನ್ನು ಕೇಳಿ “ ಓಹೋ ನಿಃಕಳಂಕ ಮಲ್ಲಿಕಾರ್ಜುನಗುರು, ಪರಮಗುರು, ಆ ಮಹಾಪಾದ ದರ್ಶನ ಆಗಬೇಕು ನಡೆಯಯ್ಯಾ '' ಎಂದು ಮಾರಯ್ಯ ಅವಸರವಾಗಿ ಮುಖಮಾರ್ಜನ-ಭಸ್ಮಧಾರಣ ಮಾಡಿಕೊಂಡು ಮಹಾದೇವಿಯಮ್ಮನಿಗೆ ಹೇಳಿ ಮಹಾಲಿಂಗನೊಡನೆ ಮಹಮನೆಗೆ ಧಾವಿಸಿಬಂದನು.

ಮಹಮನೆಯ ಮುಂದಿನ ರಾಜ ಮಾರ್ಗದ ಬಯಲಲ್ಲಿ ಪ್ರಭುದೇವರ ಮುನಿಸಿನ ನಟನೆಯು ಪರಿಣಾಮವಾಗಿ ಅಧ್ಯಾತ್ಮಿಕ ಚರ್ಚೆ ನಡೆದು ಎಷ್ಟೋ ಹೊತ್ತಾಗಿತ್ತು. ಬಸವಣ್ಣನವರ ಕಣ್ಣೀರು ಧಾರೆಯಾಗಿದ್ದವು. ಮೊದಲೇ ಮೃದು ಹೃದಯದ ಅವರ ಮುಖ ದೈನ್ಯದಿಂದ ಮ್ಲಾನವಾಗಿತ್ತು. ಶರಣರೆಲ್ಲ ಮರುಕಗೊಂಡು ನಿಂತು ಬಿಟ್ಟಿದ್ದರು. ಆದರೆ ಭಕ್ತಿಪಥವ ತಿದ್ದುವ ಆಗಿನ ತಮ್ಮ ಕಾರ್ಯ ಮುಗಿಯುತ್ತ ಬಂದಿತ್ತೇನೋ ಪ್ರಭುವಿನ ಮುಖದಲ್ಲಿ ಮಾತ್ರ ತಿಳಿನಗೆ ತೇಲಿತ್ತು. ಮಾರಯ್ಯನವರು ವಂದಿಸಿ ಶರಣರ ಗುಂಪಿನಲ್ಲಿ ಸರಿದು ನಿಂತರು.

ಚೆನ್ನಬಸವಣ್ಣನವರ ಸೂಚನೆಯಂತೆ ಬಸವಣ್ಣನವರು ಆತ್ಮಾರ್ಪಣೆ ಮಾಡಿಯಾಗಿತ್ತು. ಈಗ ಮತ್ತೆ ಬೇಡಿಕೊಂಡರು:

"ಎನ್ನ ಗತಿಮತಿ ನೀನೆ ಕಂಡಯ್ಯಾ!
ಎನ್ನಗುರು ಪರಮಗುರು ನೀನೆ ಕಂಡಯ್ಯಾ!
ಎನ್ನ ಅಂತರಂಗದ ಜ್ಯೋತಿ ನೀನೆ ಕಂಡಯ್ಯಾ!
ಕೂಡಲಸಂಗಮದೇವಾ ನೀನೆ ಎನಗೆ ಗುರು;
ನಾನು ನಿಮ್ಮ ಶರಣನೆಂಬುದ
ನಿಮ್ಮ ಶರಣ ಸಿದ್ಧರಾಮಯ್ಯದೇವರು ಬಲ್ಲರು: ಕೃಪೆಮಾಡು ಪ್ರಭುವೇ"

ಆಗ ಮಾರಯ್ಯನವರ ಭಾವ ಬಸವಣ್ಣನವರ ಭಾವದಲ್ಲಿ ಬೆರೆತು ಎನ್ನ ಗತಿಮತಿ ನೀನೆ, ಎನ್ನಗುರು ಪರಮಗುರು ನೀನೆ' ಎಂದು ಅಂತರಂಗ ನುಡಿಯುತ್ತಿತ್ತು. ಬಾಗಿನಿಂತು ನಿಟ್ಟಿಸುತ್ತಿದ್ದ ಅವರಿಗೆ ಪ್ರಭುವಿನ ಪಾದನಖಗಳಲ್ಲಿ ನಿಃಕಳಂಕ ಮಲ್ಲಿಕಾರ್ಜುನನನ್ನೇ ಕಂಡಂತಾಗುತ್ತಿತ್ತು.
ಸಿದ್ಧರಾಮ ಶಿವಯೋಗಿ ಸಮಯೋಚಿತವಾಗಿ ಹೀಗೆ ಬಿನ್ನವಿಸಿದರು:

"ಆದಿ ಅನಾದಿಯಲ್ಲಿ ಬಸವಣ್ಣನೆ ಭಕ್ತ! ನೀನೆ ಜಂಗಮ!
ಈ ಉಭಯ ಭಾವದಲ್ಲಿ ಭೇದವುಂಟೇ ಕಪಿಲಸಿದ್ಧಮಲ್ಲಿಕಾರ್ಜುನಾ
ಬಸವಣ್ಣನಾರೆಂಬುದನ್ನು ನಿಮ್ಮಲ್ಲಿ ನೀವೆ ತಿಳಿದುನೋಡಿ ಕೃಪೆಮಾಡಾ ಪ್ರಭುವೆ."

ಇದುವರೆಗೆ ಚೆನ್ನ ಬಸವಣ್ಣನವರು ಹಲವು ಬಗೆಯಾಗಿ ಬೇಡಿಕೊಂಡಿದ್ದರು. ಮತ್ತೆ ಸ್ಪಷ್ಟೋಕ್ತಿಗಳಿಂದ ಹೀಗೆ ಪ್ರಾರ್ಥಿಸಿದರು:

"ಪ್ರಭುದೇವಾ, ಬಸವಣ್ಣನ ಕಾಯಪ್ರಾಣವೇ ನಿನ್ನ ಕಾಯಪ್ರಾಣ. ನಿನ್ನ ಕಾಯಪ್ರಾಣಗಳೇ ಬಸವಣ್ಣನ ಕಾಯಪ್ರಾಣಗಳು. ನೀವಿಲ್ಲದಿರೆ ಬಸವಣ್ಣನಿಲ್ಲ; ಬಸವಣ್ಣನಿಲ್ಲದಿರೆ ನೀವಿಲ್ಲ. ಮತ್ತೆ ಬರಿದೆ ಮುನಿವರೇ ಬಲ್ಲವರು? ಬೀದಿಯಲ್ಲಿ ನಿಂದು ಅನುಭವದ ರಚ್ಚೆ ನಗೆಗೆಡೆ ನೋಡಯ್ಯಾ! ಮರಹಿಂದ ಬಂದ ಗುಣವ ಸಂಪಾದಿಸದೆ ಬಿಜಯಂಗೈವುದಯ್ಯಾ ನಿಮ್ಮ ಗೃಹಕ್ಕೆ! ಕೂಡಲ ಚನ್ನಸಂಗಮದೇವಾ ನಿಮ್ಮ ಶರಣ ಸಂಗನಬಸವಣ್ಣನಾರೆಂಬದನ್ನು ನೀನೊಮ್ಮೆ ತಿಳಿದುನೋಡಾ ಪ್ರಭುವೇ!"

"ಬಸವಣ್ಣ–ಚೆನ್ನಬಸವಣ್ಣಗಳ ಬಿನ್ನಪವನವಧಾರಿಸಿ ಬಿಜಯಂಗೈವುದಯ್ಯಾ ಕಲಿದೇವರದೇವಾ" ಎಂದು ಮಡಿವಾಳಮಾಚಯ್ಯ ಬಿನ್ನವಿಸಿದನು.

ಪ್ರಭುವಿನ ಪರೀಕ್ಷೆ ಮುಗಿದಿತ್ತು; ಮನಸ್ಸು ಪ್ರಸನ್ನವಾಗಿತ್ತು. ಮನದುಂಬಿ ನುಡಿದರು;

"....ಕೀರ್ತಿ ವಾರ್ತೆಗೆ ಮಾಡುವ ಭಕ್ತ ತಪ್ಪಿದರೆ ಅದ ಮನಕ್ಕೆ ತರಲಿಲ್ಲ. ಸಜ್ಜನ ಸದ್ಭಕ್ತನೆಡಹಿದರೆ ಅದ ಸೈರಿಸಬಾರದು ಕೇಳಾ, ನಮ್ಮ ಗುಹೇಶ್ವರ ಲಿಂಗಕ್ಕೆ ಆದಿಯಿಂದತ್ತ ನೀನೆ ಭಕ್ತನಾದ ಕಾರಣ ಮನ ನೊಂದಿತ್ತು ಕಾಣಾ ಸಂಗನಬಸವಣ್ಣಾ!"

ಮತ್ತೆ ಶರಣರನ್ನು ನೋಡಿ ನುಡಿದರು:

"ಚೆನ್ನಬಸವಣ್ಣ, ಮಡಿವಳಣ್ಣ ಕೇಳಿರಿ, ತನುಮನಧನಗಳ ಗೆಲಲರಿಯದೆ ಭ್ರಮೆಗೊಂಡಿದೆ ಲೋಕವೆಲ್ಲ. ತನುವ ದಾಸೋಹಕ್ಕೆ ಮನವ ಲಿಂಗ ಧ್ಯಾನಕ್ಕೆ ಧನವ ಜಂಗಮದಲ್ಲಿ ಸವೆಸಿ ಗೆಲಬಲ್ಲರೆ ಸಂಗನಬಸವಣ್ಣನಲ್ಲದೆ ಮತ್ತಾರನೂ ಕಾಣೆ! ಗುಹೇಶ್ವರನ ಶರಣ ಸಂಗನಬಸವಣ್ಣಂಗೆ ನಮೋ ನಮೋ ಎನ್ನುವೆ."

ಶರಣರ ಮುಖ ಅರಳುವದರಲ್ಲಿದ್ದವು. ಪ್ರಭು ಮತ್ತೆ ವಿನೋದಕ್ಕಿಳಿದು "ಸಿದ್ಧರಾಮಯ್ಯಾ, ನಡೆವಳಿಯಲೇನಾದರಾಗಲಿ, ನುಡಿವಳಿಯಲತಿಜಾಣರಾದರಿವರು. ಸರಿಯಾಯ್ತು. ನಡಿಯಿರಿ ಬಸವಣ್ಣನವರೇ," ಎಂದು ನಕ್ಕು ನುಡಿಯುತ್ತ ಒಳಗೆ ಹೆಜ್ಜೆಯಿಟ್ಟರು. ಮುನಿಸಿನ ನಾಟಕ ಪರಮಾನಂದದಲ್ಲಿ ಪರ್ಯಾವಸಾನ ಹೊಂದಿತು.

ಅಂದು ಪೂಜಾ–ಸತ್ಕಾರ ಸಕಲೋಪಚಾರಗಳಲ್ಲೆಲ್ಲ ಮಾರಯ್ಯನವರು ಮಹಮನೆಯಲ್ಲಿಯೇ ಇದ್ದು ಭಾಗವಹಿಸಿದರು. ಈ ಸಂದರ್ಭದಲ್ಲಿ ಮಹಾ

ಘನದ ಅನುವು ಪಡೆದ ಸಿದ್ಧರ–ಸಾಧಕರ ನೆಲೆ ನಿಲವುಗಳನ್ನು ಅವರು ಅನುಭವಿಸುತ್ತ ಆನಂದಿಸುತ್ತಿದ್ದರು. ಇತ್ತ ಮಹಾದೇವಿಯಮ್ಮನವರು ಕುಟೀರದಲ್ಲಿ ತಮ್ಮ ನಿತ್ಯದ ದಾಸೋಹದ ತೃಪ್ತಿಯಲ್ಲಿದ್ದರು. ಮತ್ತೆ ಸಂಜೆಗೆ ಅನುಭವ ಮಂಟಪದಲ್ಲಿ ಅಂದು ಮೊದಲಸಲ ಆಗುವ ಪ್ರಭುದೇವರ ಪ್ರವಚನಕ್ಕಾಗಿ ಮಹಮನೆಗೆ ತೆರಳಿದ್ದರು.

\+ \+ \+

ಮರುದಿನವೇ ಮಹಮನೆಯಲ್ಲಿ ಮತ್ತೊಂದು ತಾತ್ವಿಕ ಬಿಕ್ಕಟ್ಟು ತಲೆದೋರಿತ್ತು. ಅದು ಸಿದ್ಧರಾಮಶಿವಯೋಗಿಗೆ ಇಷ್ಟಲಿಂಗವಿಲ್ಲದಿರುವ ಆಕ್ಷೇಪಣೆಯಿಂದ ಬಂದಿತ್ತು. ಅನುಭವ ಮಂಟಪದ ಕಾರ್ಯದರ್ಶಿ ಚೆನ್ನಬಸವಣ್ಣನವರು ಅದನ್ನು ಪ್ರಶ್ನಿಸಿ, ಸಿದ್ಧರಾಮ ಶಿವಯೋಗಿಗಳು ಶರಣರ ಗುಂಪಿನಲ್ಲಿ ಸಮಾವೇಶಗೊಳ್ಳುವದನ್ನು ಆಕ್ಷೇಪಿಸಿದ್ದರು. ಪ್ರಭುದೇವರ ಸಮ್ಮುಖದಲ್ಲಿ ಈ ಬಗೆಗೆ ಚರ್ಚೆ ನಡೆದು ನಿರ್ಣಯವಾಗಬೇಕಾಗಿತ್ತು.

“ ಚೆನ್ನಬಸವಣ್ಣನವರ ಆಕ್ಷೇಪಕ್ಕೆ ಏನು ಹೇಳುವೆ ನೋಡು ಸಿದ್ಧರಾಮಯ್ಯಾ ” ಎಂದರು ಪ್ರಭುದೇವರು. ಇಷ್ಟಲಿಂಗಧಾರಣೆಯಲ್ಲಿಯ ತತ್ವ ವಿಶೇಷವು ಪ್ರಚುರಗೊಳ್ಳಲಿಕ್ಕೆ ಈ ವಾದ ಸಾಕಷ್ಟು ಅನುವು ಮಾಡಿಕೊಡಲೆಂಬುದು ಅವರ ಇಂಗಿತವಾಗಿತ್ತು.

ಸಿದ್ಧರಾಮಯ್ಯನವರು ಉತ್ತರಿಸಲು ಸಿದ್ಧರೇ ಆಗಿದ್ದರು:

“ ಒಳಗೆ ಚಿತ್ಕಳೆಯನ್ನು ಕಂಡ ಸಿದ್ಧನಿಗೆ ಹೊರಗೆ ಲಿಂಗವನ್ನು ಧರಿಸುವ ಹಂಗೇಕೆ ? ”

ಪ್ರಭುದೇವರು “ ನೋಡು ಚೆನ್ನಬಸವಣ್ಣಾ ನಿನ್ನ ಜ್ಞಾನದ ಗಂಟು ಬಿಚ್ಚಲಿ ” ಎಂದರು ಚೆನ್ನಬಸವಣ್ಣ ಉತ್ತರಿಸಿದರು:

“ ಅಂಗದಲ್ಲಿ ಲಿಂಗಸಂಬಂಧವಿಲ್ಲದನ್ನಕ್ಕರ
ಪ್ರಾಣದಲ್ಲಿ ಲಿಂಗದ ಪರಿಣಾಮವೆಂತಪ್ಪುದಯ್ಯಾ ?
ಅಂಗತ್ರಯವುಳ್ಳವರು ಲಿಂಗತ್ರಯಸಂಪನ್ನರಾಗಬೇಕು.
ಒಂದೊಂದಂಗ ವಿರಹಿತರಾಗಿಪ್ಪರುಂಟೇ ?
ಕಂಗಳ ನೋಟಕ್ಕೆ ಇಂಬಾವದು ಹೇಳಾ ?
ಒಂದು ಬಿಟ್ಟು ಒಂದು ತೋರದು.
ಸಂದು ಭೇದ ವಿಲ್ಲದಿಪ್ಪ ನಿಲವು ಕೂಡಲ ಚೆನ್ನಸಂಗಯ್ಯನಲ್ಲಿ
ನಿನಗೆಂತು ಸಾಧ್ಯವಾಯಿತ್ತು ಹೇಳಾ ಸಿದ್ಧರಾಮಣ್ಣಾ ! ”

ಪ್ರಭುದೇವರು ಪ್ರಸಂಗವನ್ನು ಹಿಗ್ಗಿಸುವದಕ್ಕಾಗಿಯೇ ಹೇಳಿದರು:

" ಆಕಾಶವನಡರುವಂಗೆ ಅಟ್ಟಗೋಲ ಹಂಗೇಕೋ ?
ಸಮುದ್ರ ದಾಟುವಂಗೆ ಹರಗೋಲ ಹಂಗೇಕೋ ?
ಸೀಮೆಯ ಮೀರಿದ ನಿಸ್ಸೀಮಂಗೆ ಸೀಮೆಯ ಹಂಗೇಕೋ ?
ಗುಹೇಶ್ವರ ಲಿಂಗದಲ್ಲಿ ನಿಸ್ಸೀಮ ಸಿದ್ಧರಾಮಯ್ಯಂಗೆ
ಲಿಂಗವೆಂದರೇನು ಹೇಳಾ ಚನ್ನಬಸವಣ್ಣಾ "

ಮಿಂಚಿನಂತೆ ಮೂಡಿಬಂದಿತು ಚೆನ್ನಬಸವಣ್ಣನವರ ಉತ್ತರ:

" ಆಕಾಶದೊಳಾಡುವ ಪಟಕ್ಕಾದರೂ ಮೂಲಸೂತ್ರವಿರಬೇಕು.
ಕಲಿಯಾದರೂ ಕಜ್ಜವಿಲ್ಲದಾಗದು; ಭೂಮಿ ಇಲ್ಲದೇ ಬಂಡಿ ನಡೆವುದೇ ?
ಅಂಗಕ್ಕೆ ಲಿಂಗಸಂಗಮವಲ್ಲದೆ ನಿಸ್ಸಂಗಿಯಾಗಿರಬಾರದು.
ಕಣ್ಣು ಕಾಣುತ್ತದೆಂದರೆ ದೀಪವಿಲ್ಲದೆ ಕತ್ತಲೆಯಲ್ಲಿ ಅದು ಕಾಣಬಲ್ಲದೇ ?
ಸೂರ್ಯಪ್ರಕಾಶದಿಂದ ಪದಾರ್ಥವು ಕಾಣುವದಲ್ಲದೆ
ನನ್ನಿಂದಲೇ ಕಾಣುತ್ತದೆಂದು ಕಣ್ಣು ಹೇಳಬಹುದೇ ?
ಸ್ಥೂಲ-ಸೂಕ್ಷ್ಮ ಕಾರಣಗಳೆಂಬ ತನುತ್ರಯವಿರಲು,
ಇಷ್ಟ-ಪ್ರಾಣ- ಭಾವಗಳೆಂಬ ಲಿಂಗತ್ರಯಗಳು ಬೇಡವೆಂದಡೆ
ಅಸಂಖ್ಯಾತ ಪ್ರಮಥರು ಒಪ್ಪುವರೇ ?
ಅಂಗಲಿಂಗ ಸಂಬಂಧವಿಲ್ಲದ ನಿಸ್ಸಂಗಿಯನ್ನು
ಕೂಡಲಚೆನ್ನಸಂಗಮದೇವ ಮೆಚ್ಚುವದಿಲ್ಲ. "

ಮಾತು ನಿರ್ಣಯದ ಮಟ್ಟಕ್ಕೆ ಸನ್ನಿಹಿತವಾಗಿತ್ತು. ಯಾವಯಾವ ಹಿರಿಯ ಶರಣರ ಲಿಂಗಾನುಭವದ ರಸಪಾಕ ಹೇಗಿರುವದೆಂಬದನ್ನು ಅರಿಯಲು ಪ್ರಭು ಒಬ್ಬೊಬ್ಬರ ಮುಖ ನೋಡುತ್ತ ಬಂದಾಗ ಬಸವೇಶ್ವರ, ಸಕಲೇಶಮಾದರಸು, ಮಾಚಿದೇವ, ಚಂದಯ್ಯ, ಘಟ್ಟಿವಾಳಯ್ಯ, ಮುಂತಾದವರೆಲ್ಲ ಇಷ್ಟಲಿಂಗಧಾರಣೆಯ ಅಗತ್ಯವನ್ನು ಹೃದಯಂಗಮವಾಗಿ ನಿರೂಪಿಸಿದರು. ಪ್ರಭುದೇವರು ಮಾರಯ್ಯನವರತ್ತ ಹೊರಳಿದರು:

"ಮಾತನಾಡದ ಮಾರಯ್ಯನವರ ಅಂತರಂಗದ ಘನವ ಶಬ್ದಸೂತ್ರದಿಂದ ಅರಿಯುವದು ಗುಹೇಶ್ವರನ ಶರಣರ ಬಯಕೆ" ಎಂದು ಪ್ರಶ್ನಾರ್ಥಕವಾಗಿ ಅವರ ಮುಖ ನೋಡಿದರು. ಮಾರಯ್ಯನವರು ತಮ್ಮ ಒಳಬಗೆಗೆ ಕನ್ನಡಿಹಿಡಿದಂತೆ ತಮ್ಮ ನಿರೂಪಣೆ ನೀಡಿದರು:

“ಗರಳವಿಲ್ಲದುರಗಂಗೆ ಹಲಬರಂಜಿದರುಂಟೇ?
ಕೈದುವಿಲ್ಲದ ಬಂಟ ಗರ್ಜಿಸಿದರೆ ಅಂಜಿದವರುಂಟೇ?
ಇಷ್ಟ ಬಾಹ್ಯದೃಷ್ಟದ ಮಾತನಾಡಿದರೆ ನೆಟ್ಟನೆ ಪ್ರಾಣಲಿಂಗಿಯಪ್ಪನೇ?
ಇದು ನಿಶ್ಚಯವಲ್ಲ ನಿಃಕಳಂಕ ಮಲ್ಲಿಕಾರ್ಜುನಾ.

ಸರ್ವಸ್ಥಾವರ ಮೂಲಂಗಳಿಗೆಲ್ಲಕ್ಕೂ ಪೃಥ್ವಿಯಾದಿ ಅಪ್ಪುವಿನ ಸಾರದಿಂದ
ಪಲ್ಲವಿಸಿ ದೃಕ್ಕಿಂಗೆ ದೃಷ್ಟವಾದ ತೆರನಂತೆ
ಇಷ್ಟದ ಪೂಜೆ ದೃಷ್ಟವಾಗಿ, ಅದೃಷ್ಟ ನಿಶ್ಚಯವಾದಲ್ಲಿ
ಪ್ರಾಣಲಿಂಗ ಸಂಬಂಧ ನಿಃಕಳಂಕ ಮಲ್ಲಿಕಾರ್ಜುನಾ

ತಿಲದ ಮರೆಯ ತೈಲವನು ಅರೆದು ಕಾಬ ತೆರನಂತೆ
ಫಲದ ಮರೆಯ ರಸವ ಹಿಳಿದು ಕಾಬ ರಸರುಚಿಯಂತೆ
ತೆರೆಯ ಮರೆಯ ರೂಪ, ತೆಗೆದು ಕಾಬ ತೆರನಂತೆ
ಇಷ್ಟದ ಮರೆಯಲ್ಲಿರ್ದ ದೃಷ್ಟವನುಭಯ ನಿಶ್ಚಯಿಸಿದಲ್ಲಿ
ಪ್ರಾಣಲಿಂಗ ಸಂಬಂಧಿ ನಿಃಕಳಂಕ ಮಲ್ಲಿಕಾರ್ಜುನಾ.”

ಇದೇ ಬಗೆಯಾಗಿ ಪ್ರಮಥರೆಲ್ಲರು ಚೆನ್ನಬಸವಣ್ಣನವರಿಗೆ ಬೆಂಬಲವಾಗಿ ಮಾತನಾಡಿದರು. ಪ್ರಭುದೇವರು ‘ಇಷ್ಟಲಿಂಗ ಸಂಬಂಧವಿಲ್ಲದೆ ಪ್ರಾಣಲಿಂಗ ಸಂಬಂಧವಾಗದು’ ಎಂದು ಸ್ಪಷ್ಟಪಡಿಸಿದರು. ಸಿದ್ಧರಾಮಯ್ಯನವರು ಚೆನ್ನಬಸವಣ್ಣನವರಿಗೆ ಶರಣು ಹೋದರು. ಅವರಿಗೆ ಚೆನ್ನಬಸವಣ್ಣನವರಿಂದ ತ್ರಿವಿಧದೀಕ್ಷೆ ನಡೆದು ಇಷ್ಟಲಿಂಗ ಧಾರಣೆಯಾಯಿತು.

# ೧೧. ಕಾಯಕದ ಕನಕ

ಶರಣೆ ಮಹಾದೇವಿಯಮ್ಮ ಕುದಿ ಇಳಿದ ಅಂಬಕಳಿಯಲ್ಲಿಯ ಹುಟ್ಟು ತೆಗೆದು ಸವರಿ ಇಟ್ಟಳು. ಪಾತ್ರೆಯ ಮೇಲೆ ಹರಿವಾಣವಿಟ್ಟಳು. ಬಳಿಕ ಬಾಗಿಲತ್ತ ಬಂದು ಇಣಕುವ ಹೊತ್ತಿಗೆ, ಅಲ್ಲಿ ನಿಂತ ಜಂಗಮಮೂರ್ತಿಯೊಬ್ಬ ಕೈ ಮುಗಿದೆಂದನು:

“ಶರಣು ಶರಣಾರ್ಥಿ ತಾಯೀ, ಲಿಂಗಾವಸರ, ಲಿಂಗದೇವ ಹಸಿದಿದ್ದಾನೆ”

ಅವನ ಆ ದನಿಯೊಡನೆ ಆವನ ಪಾದಕ್ಕೆರಗಿದ್ದಳಾ ತಾಯಿ!

“ಆಗಲಿ ಸ್ವಾಮೀ ಸಂತೋಷ! ಒಳಗೆ ದಯಮಾಡಿಸಬೇಕು” ಎಂದು ಸ್ವಾಗತಿಸಿದಳು. ಎರಡು ಹೆಜ್ಜೆ ಹಿಂದೆ ಹೋಗಿ ತಂಬಿಗೆ ತಂದು ಪಾದಕ್ಕೆ ಅಗ್ಗವಣಿಯನಿತ್ತಳು. ಜಂಗಮ ಒಳಗೆ ಬಂದು ಸದಾಸಿದ್ಧವಾಗಿರುತ್ತಿದ್ದ ಗದ್ದುಗೆಯ ಮೇಲೆ ಕುಳಿತನು. ಸಂಕ್ಷಿಪ್ತವಾಗಿ ಲಿಂಗಾರ್ಚನೆ ಮಾಡಿ ಲಿಂಗಮಜ್ಜನದ ಪಾತ್ರೆಯನ್ನು ಎಡಗಡೆಗೆ ತಾನೇ ಸರಿಸಿ ಇಟ್ಟು, ಅದರ ಮರೆಗೆ ಮತ್ತೆ ಏನನ್ನೋ ಮಡಗಿ ತ್ವರೆಯಾಗಿ ಎಡೆಬಟ್ಟಲವನ್ನು ಮುಂದಿಟ್ಟುಕೊಂಡು ಕುಳಿತನು. ಪ್ರಸಾದಗ್ರಹಣದ ಆತುರ ಆ ಜಂಗಮಮೂರ್ತಿಗೆ! ಮಾರಯ್ಯನವರ ಕಾಯಕಕೈಲಾಸದ ಅಮೃತವಲ್ಲವೇ ಅದು?

ಇತ್ತ ಜಂಗಮಮೂರ್ತಿ ತವಕ ಪಡುತ್ತಿರುವಾಗ ಮಹಾದೇವಿಯಮ್ಮ ಅತ್ತ ನೋಡದೆ ಅಂಬಲಿಯನ್ನು ಬೇರೆ ಪಾತ್ರೆಗೆ ಬಾಗಿಸಿ ಆರಿಸಿಟ್ಟುಕೊಂಡಿದ್ದಳು. ಅದನ್ನೂ ಗೋಕ್ಷೀರವನ್ನೂ ಎಡೆಮಾಡಿ, ಸಲ್ಲಿಸಬೇಕೆಂದು ನಮಿಸಿ ಬಿನ್ನವಿಸಿದಳು. ಜಂಗಮದೇವ ಒಮ್ಮೆ ಸುರಿದ, ಅಂತರಂಗದಲ್ಲೆಲ್ಲ ಶಾಂತಚೈತನ್ಯ ಮೂಡಿದಂತಾಯಿತು. ಮತ್ತೆ ಮತ್ತೆ ಸುರಿದ, ಅದೆಂಥ ರುಚಿ! ಅದೆಂಥ ಆನಂದ! ಅದೆಂಥ ತೃಪ್ತಿ! “ತಾಯೀ ನಿಮ್ಮ ಅಂಬಕಳಿಯ ರುಚಿ ಅಗಾಧವಾದದ್ದು; ಬಹುಜನರು ಉಂಡು ವರ್ಣಿಸಿದ್ದಾರೆ. ನಾನಿಂದು ಪ್ರತ್ಯಕ್ಷ ಅನುಭವಿಸಿದೆ. ನಿಜವಾಗಿಯೂ ಮಹಮನೆಯ ಷಡ್ರಸಾನ್ನಗಳಿಗಿಂತ ಸವಿಯಾಗಿದೆ.’ ಎಂದು ತಲೆಯೆತ್ತದೆ ನುಡಿಯುತ್ತ ಸುರಿಯುತ್ತ ಇದ್ದನು. ಮತ್ತೊಮ್ಮೆ ಎಡೆಮಾ

ಡಿದಳು ತಾಯಿ. ಅದನ್ನೂ ಸಲ್ಲಿಸಿ ತೇಗಿ ಎದ್ದನು ಜಂಗಮ! ಮಹಾದೇವಿ ಬಾಗಿ ತನಗೆ ನಮಿಸುವದಕ್ಕೂ ಆಸ್ಪದ ಕೊಡದೆ 'ಶರಣು, ಶರಣು' ಎನ್ನುತ್ತ ಲಗುಬಗೆಯಿಂದ ಹೊರಬಿದ್ದು ಹೋಗಿಬಿಟ್ಟನು. ನಿತ್ಯ ಬರುವ ಜಂಗಮರಲ್ಲಿ ಹಲವರು ಹಲವು ತರ! ಅವರು ಹಾಗೆ ಇವರು ಹೀಗೆ ಎಂಬ ಎಣಿಕೆಯೇ ಅಮ್ಮನವರಿಗಿರುತ್ತಿರಲಿಲ್ಲ. ದಾಸೋಹವೊಂದೇ ಗುರಿ. ಅದರಲ್ಲಿ ಆನಂದ! ಸದಾನಂದ ಯಾವಾಗಲೂ ಒಂದೇ ಅಲ್ಲವೇ?

ಹೊತ್ತೇರಿತ್ತು, ದಾಸೋಹಮೂರ್ತಿ ಮಾರಯ್ಯ ಲಿಂಗಧ್ಯಾನದಲ್ಲಿ ಮನ ಏರಿಸಿಕೊಂಡು ಬಂದು, ಕಟ್ಟಿಗೆಯ ಹೊರೆಯನ್ನಿಳಿಸಿ ಬೆವರು ಒರಿಸಿಕೋಡರು. ಮಹಾದೇವಿ ನೀರು ತಂದು ಕಾಲು ತೊಳೆದು ಬರಮಾಡಿಕೊಂಡಳು. ಮಾರಯ್ಯ ಸ್ನಾನ ಮಾಡಿ ಶಿವಾರ್ಚನೆಗೆ ಕುಳಿತು ಮಜ್ಜನಪಾತ್ರೆಯನ್ನು ಮುಂದೆಳೆದುಕೊಂಡಾಗ ಅದರ ಒತ್ತಿನಲ್ಲಿ ಅಡಗಿಸಿಟ್ಟಿದ್ದ ಚಿನ್ನದ ನಾಣ್ಯಗಳ ಎರಡು ಚೀಲಗಳು ಕಣ್ಣಿಗೆ ಬಿದ್ದವು. ಅಚ್ಚರಿಯಿಂದ ಹೆಂಡತಿಯನ್ನು ಕೇಳಿದನು:

"ಇವೇಕೆ ಇಲ್ಲಿ? ಇಲ್ಲಿ ಹೇಗೆ ಬಂದವು?"

ಆ ಶರಣೆ ಅದನ್ನೇನೂ ಅರಿಯಳು. ಅವಳಿಗೂ ಅಚ್ಚರಿ!

"ಜಂಗಮದೇವನೊಬ್ಬ ಬಂದು, ಅರ್ಚನೆ ಅರ್ಪಿತ ಮಾಡಿಕೊಂಡು ಹೋದನು. ಹೊನ್ನಿನ ವಿಷಯ ತನಗೇನೂ ತಿಳಿಯದು" ಎಂದಳು.

ಮಾರಯ್ಯನ ಜೀವ ಕೊಳ್ಳಕ್ಕೆ ಇಳಿದಂತಾಯಿತು. ಆದರೂ ಅದರ ಸಮತೂಕ ತಪ್ಪದಂತೆ ನಡೆದು ಲಿಂಗಾರ್ಚನೆ ಜಪ-ಧ್ಯಾನ ನೆರವೇರಿಸಿ ಎದ್ದನು. ಮತ್ತೆ ಕಣ್ಣು ಕೊರೆದ ಆ ಹೊನ್ನ ಜಾಳಿಗೆಗಳ ಬಗೆಗಿನ ಊಹಾಪೋಹ! ಸತ್ಯಕಾಯಕದ ನಿರ್ಮಲ ತಪದಿಂದ ಪರಿಶುದ್ಧವಾದ ಅಂತರಂಗದ ಬುದ್ಧಿಗೆ ಹೊಳೆದುದು ನಿಜವಾದ ಊಹೆಯೇ ಆಗಿತ್ತು. ಆ ಶರಣನು ಮಹಾದೇವಿಯನ್ನು ನೋಡಿ!

"ಆ ಪ್ರಚ್ಛನ್ನ ಜಂಗಮ ಬಸವಣ್ಣನಲ್ಲದೇ ಇನ್ನಾರು ಇರಬೇಕು? ನಾವು ಬಡವರು, ಬಣಗು ಭಕ್ತರು; ಧನಪತಿ ತಾನೆಂದು ಹೊನ್ನನಿತ್ತು ಸಹಾಯ ಮಾಡಲು ಬಂದಿದ್ದಾನೆ, ಅಲ್ಲವೇ?"

"ಹಾಗಲ್ಲ, ಅಣ್ಣನವರು ದಯಾಪರರು, ಭಕ್ತರ ಬಂಧುಗಳು, ಶಿವಭ

ಕ್ತರ ನೋವೇ ಲಿಂಗದ ನೋವೆಂದು ನಂಬಿದವರು, ನಮ್ಮ ಬಡಬಾಳುವೆ
ಮನಗರಗಿಯೇ ಹೀಗೆ ಮಾಡಿರಬಹುದು.''

''ಮಹಾದೇವೀ ಯಾರು ಬಡವರು, ಯಾರು ಒಡೆಯರು? ದು
ಯುವವರು ಬಡವರಾದರೂ ಒಡೆಯರು. ಲಿಂಗದೇವನಿತ್ತ ಕಾಯಕ ನಮ
ಇರಲು ನಾವು ಬಡವರೇ? ಕಾಯಕದ ಪ್ರಸಾದಸಂಪತ್ತು ನಮಗಿರುವಾ
ಈ ವ್ಯಭಿಚಾರಿ ಹೊನ್ನಿನ ಸಂಪತ್ತು ನಮಗೇಕೆ?

''ಬೇಡವೇ ಬೇಡ! ನಾನೆಲ್ಲಿ ಇದು ಇರಲಿ ಎನ್ನುತ್ತೇನೆ? ಅಣ್ಣ
ವರ ದಯಾಹೃದಯ ತಿಳಿಯಬೇಕೆಂದೆನಿಷ್ಟೇ!''

''ಹಾಗಾದರೆ ಇದನ್ನು ಮೊದಲು ಇಲ್ಲಿಂದ ಹೊರಡಿಸಬೇಕು''

ಮಾರಯ್ಯನವರ ಹೊತ್ತನರಿತ ಜಂಗಮರಿಬ್ಬರು ಅದೇ ಹೊತ್ತಿ
ಬಾಗಿಲಿಗೆ ಬಂದಿದ್ದರು. ಅವರನ್ನು ನೋಡಿ ಮಾರಯ್ಯ 'ಬನ್ನಿ ಸ್ವಾಮೀ ಮೊದಲ
ಇವುಗಳನ್ನು ಸಲ್ಲಿಸಿಕೊಳ್ಳಿರಿ.' ಎನ್ನುತ್ತ ಆ ಹೊನ್ನ ಚೀಲಗಳನ್ನು ಜಂ
ಮರಿಗಿತ್ತು ಕೈಮುಗಿದು 'ಸ್ವಲ್ಪವಿಶ್ರಮಿಸಿರಿ. ನಾನು ಈಗಲೇ ಬರುವೆ. ಬೇ
ಎಡೆ ಮಾಡಲಾಗುವದು' ಎಂದು ಒಂದೇ ಉಸುರಿನಲ್ಲಿ ನುಡಿಯುತ್ತ ಅ
ಸರದಿಂದ ಹೊರಗೆ ಹೋದನು.

ಜಂಗಮದ್ವಯರಿಗೆ ಆಶ್ಚರ್ಯ, ಒಬ್ಬರ ಮುಖವನ್ನೊಬ್ಬರು ನೋ
ನಾಣ್ಯಗಳ ಚೀಲಗಳನ್ನು ಬಟ್ಟೆಯಲ್ಲಿ ಸುತ್ತಿ ಕಂಕುಳಲ್ಲಿಟ್ಟುಕೊಂಡು ಕು
ತರು.

ಶರಣ ತೆರಳಿದ ಬಗೆ ಮಹಾದೇವಿಯಮ್ಮನಿಗೆ ಗೊತ್ತು. ಆಕೆಯ ಮ
ದಲ್ಲಿ ಮಹೋತ್ಸಾಹ! ಒಲೆಯ ಮೇಲೆ ಇನ್ನೊಂದು ಹರವೆಯನ್ನು ಎಸ
ಗಿಟ್ಟು ಹಿಟ್ಟು ಸುರುವಿ ತುಂಬ ಅಂಬಲಿಯನ್ನು ಸಿದ್ಧಗೊಳಿಸಿದಳು. ಮಾರಯ
ಮಹಮನೆಯ ಕಡೆಗೆ ಹೊರಟಿದ್ದ ಜಂಗಮರ ಗುಂಪೊಂದಕ್ಕೆ ಬಿನ್ನಹಮಾ
ಕರೆದುಕೊಂಡು ಬಂದನು. ಅವರೆಲ್ಲರು ಮಾರಯ್ಯನವರ ಘನಚಾರಿತ್ರವನ
ಬಲ್ಲವರು. ಅವರ ಅನನ್ಯ ಭಕ್ತಿ, ನಿಷ್ಕಲಂಕವಾದ ನಡೆನುಡಿ, ಸತ್ಯಕಾಯ
ಕದಿಂದ ನಡಿಸಿದ ದಾಸೋಹ ಇವನ್ನು ಮೆಚ್ಚಿದವರು. ಒಮ್ಮೆಲ್ಲೊ ವ
ಅವರ ಅಂಬಲಿಯ ರುಚಿಯನ್ನು ಸವಿದವರು ಆಗಿದ್ದರು. ಮಾರಯ್ಯ
ಬಿನ್ನಹವನ್ನು ಮನ್ನಿಸಿ ಆನಂದದಿಂದ ಇತ್ತ ಬಂದರು. ಸಂಭ್ರಮದಿಂದ ಜಂ

ಮಾರಾಧನೆ, ಆರೋಗಣೆ ನಡೆದವು. ಗಣಂಗಳಿಗೆ ಎಂದಿಲ್ಲದ ತೃಪ್ತಿ. ಮಾರಯ್ಯನವರ ಭಕ್ತಿಭರಕ್ಕೆ ಮಾರು ಹೋಗಿದ್ದರು. ಅರ್ಪಿತ ಮುಗಿಸಿ ಅಂಗಳಕ್ಕೆ ಬಂದು ನಿಲ್ಲುತ್ತಾರೆ. ಅಲ್ಲಿ ಮೋಳಿಗೆಯ–ಕಟ್ಟಿಗೆಯ–ಹೊರೆ. ಅದನ್ನು ನೋಡಿದರು; ನೆಟ್ಟ ನೋಟದಿಂದ ನಿಂತು ನೋಡಿದರು. ಮಾರಯ್ಯನವರ ಜೀವನವನ್ನು ಪ್ರತಿಬಿಂಬಿಸುತ್ತಿದೆ ಆ ಹೊರೆ. ಅಲ್ಲದೆ ಶಿವ–ಜೀವ–ಜಗತ್ತುಗಳನ್ನು ನಿಷ್ಠೆಯಿಂದ ಕಟ್ಟಿ ಬಿಗಿದಂತಿದೆ ಆ ಕಟ್ಟು! ಅಮೂಲ್ಯ ವಸ್ತುವದು. ಲಿಂಗಪ್ರಾಣಿ- ಪ್ರಾಣಲಿಂಗಿಯ ತನುಕರಗಿದ, ಮನವರತ, ಭಾವಬೆರೆತ ಕಾಯಕದ ಮೂರ್ತಸ್ವರೂಪವದು! ಈ ಸಾರ್ಥಕತೆಯಲ್ಲಿ ಅವಸಾನಗೊಂಡ ಗಿಡಗಳು ಅಮರ, ಧನ್ಯ! ಎನ್ನುವಂತಿತ್ತು ಆ ಗಣಂಗಳ ಕಣ್ಣು–ಮನ–ಭಾವಗಳ ಸಂಯುಕ್ತದೃಷ್ಟಿ!

ಈ ಶಿವಭಾವ ಸೌರಭದಲ್ಲಿ ಅಂಗಳಕ್ಕೆ ಬಂದ ಮಾರಯ್ಯ ಕೈಯ ಪಾತ್ರೆಯಲ್ಲಿಯ ಪಾದೋದಕವನ್ನು ಎಂದಿನಂತೆ ಹೊರೆಗೆ ಚಿಮುಕಿಸಿದನು. ಅದನ್ನೇ ನೋಡುತ್ತಿದ್ದ ಗಣಂಗಳ ನಿಬ್ಬೆರಗಿನ ನೋಟದಿಂದ ಉತ್ತೇಜಿತವಾದ ಅವನ ಎದೆಯ ವೇದನೆ ಮುಲುಕಳಿಸಿದಂತಾಗಲು ಭಾವೋದ್ರೇಕಗೊಂಡು ಆ ಗಣತಿಂತಿಣಿಗೆ ಸಾಷ್ಟಾಂಗವಾಗಿ ನಮಿಸಿ ನುಡಿದನು :

‘ ಒಡೆಯರೆ ನಾವು ಬಡವರೆಂದು ನಿಮ್ಮವರು ನಿದಾನವನೀವರಯ್ಯಾ; ನಾ ಬಡವನಾದರೆ ನಿಃಕಳಂಕ ಮಲ್ಲಿಕಾರ್ಜುನ ಬಡವನೇ ? ಆ ಮಹಾವಿಭು ಕರುಣಿಸಿದ ಕಾಯಕದ ನಿಧಿ ಇದು. ಶಿವನ ಪ್ರಸಾದ ! ತಮ್ಮ ಈ ಪಾದ ಸೇವೆಗೆ ಕರುಣಿಸಿದ ಚಿನ್ನವಲ್ಲವೇ ಇದು? ಆ ಚಿನ್ನಕ್ಕಿಂತ ಈ ಚಿನ್ನದ ಬೆಲೆ ಕಡಿಮೆಯೇ ದೇವಾ....”

ಕೂಡಲೆ ಗಣಂಗಳು ಉದ್ಗರಿಸಿದರು :

“ ಅಲ್ಲ, ಅಲ್ಲ! ”

“ ಇದು ಅಮೂಲ್ಯ ಶರಣಾರ್ತಿ, ”

‘ ಅದು ಜಡ, ಇದು ಚೇತನಾತ್ಮಕ ! ”

“ ಅದು ಪರಪ್ರಕಾಶಕ ಬಂಗಾರ; ಇದು ಸ್ವಯಂ ಪ್ರಕಾಶಕ ಬಂಗಾರ!

“ ಇದು ಸತ್ಯಕಾಯಕದಿಂದ ಸಂಜನಿಸಿದ ಅಪರಂಜಿ! ಅದು ಮಾಯೆಯ ಮನೆಯಾದ ಜಡ ಕಡವಸ!

“ ಇದು ಪರಸಃಗುಣದ ವರಸುವರ್ಣ! ಕಾಯಕದ ಕಡುಚೆಲ್ವಕನಕ”

ಕಾಯಕ ನಿಷ್ಠೆ ಮೈದುಂಬಿ ಮಾರಯ್ಯ ಪರವಶನಾದನು. ಕಟ್ಟಿನೊಳಗಿನ ಕಾಷ್ಟದಂಡವನೊಂದು ಈಚೆಗೆಳೆದು ತಕ್ಕೊಂಡು ಮೇಲೆತ್ತಿ ನುಡಿದನು:

“ಇದು ಬಡವರ ಬಂಗಾರ, ಬಣಗು ಭಕ್ತರ ಬಂಗಾರ! ಇದನ್ನು ಅಣ್ಣನವರು ಅರಿಯರೇ ? ಅಥವಾ ಮರವೆಯಾಗಿರಬಹುದು. ಇಲ್ಲದಿದ್ದರೆ ಮಹಾಪ್ರಣವಸ್ವರೂಪ ಅಣ್ಣನವರು ತನ್ನ ಮಠಕ್ಕೆ ತಾನೇ ವೇಷ ಮರೆಸಿ ಬರುತ್ತಿದ್ದರೇ? ಬಂದು ಭಕ್ತಿವಸ್ತುವಾದ ಹೊನ್ನ ಜಾಳಿಗೆಯ ಇಡುತ್ತಿದ್ದರೇ ? ಇತ್ತೊಡೆ ಅವನ್ನು ನಿಃಕಳಂಕ ಮಲ್ಲಿಕಾರ್ಜುನನ ಭಕ್ತರಿಗಿತ್ತು ಬದುಕಿದೆನಯ್ಯಾ ! ” ಗಟ್ಟಿಸಿ ನುಡಿದರು:

ಗಣ ತಿಂತಿಣಿಯ ಹಿಂಭಾಗದಲ್ಲಿ ಗುಣುಗುಣು ನಡೆದು ಎಲ್ಲರಿಗೂ ನಡೆದ ಘಟನೆಯ ಪರಿಚಯವಾಯಿತು: ಕ್ಷತ್ರಿಯ ರಾಜತ್ವದ ಪರಂಪರೆಯಲ್ಲಿ ಬೆಳೆದ ದೇಹ ಮಾರಯ್ಯನವರದು. ಕಂಠಧ್ವನಿ ಎತ್ತರವಾಗಿಯೇ ಇತ್ತು. ಆದರೆ ಆ ಮಾತುಗಳ ಅಂತರಂಗದಲ್ಲಿ ಸತ್ಯ, ನಿಷ್ಠೆ, ಕಾಯಕಗಳ ಶಿವತೇಜ ವಿಜೃಂಭಿಸುತ್ತಿತ್ತು. ಮಾರಯ್ಯನವರ ಸ್ವಯಭಾವಕ್ಕೆ ಮಾರುಹೋದ ಅನುಭಾವಿ ಜಂಗಮರೊಬ್ಬರು ಹೊರೆಯೊಳಗಿನ ಒಂದು ಕಟ್ಟಿಗೆಯನ್ನು ಹೊರದೆಗೆದು ಹಿಡಿದು ಗಂಭೀರವಾಗಿ ನುಡಿದರು.

“ಮಾರಯ್ಯನವರೆ, ಈ ಕಟ್ಟಿಗೆ ತುಂಡು ನಿಮ್ಮ ಕಾಯಕ ನಿಷ್ಠೆಯ ಪ್ರತಿಕೃತಿ. ಇದರಲ್ಲಿ ಅಡಗಿದ್ದ ಅಗ್ನಿ ಜ್ಞಾನಾಗ್ನಿ! ಇದರ ನಾದ ಶಿವ ಪಂಚಾಕ್ಷರೀ ನಾದ! ನಿಮ್ಮ ಪರಿಶುದ್ಧ ಕಾಯಕ ಕ್ರಿಯೆಯಿಂದ ಸಂಸ್ಕಾರಹೊಂದಿದ ಈ ಕೋಲು ನಮಗೆ ಪೂಜ್ಯ ಆರಾಧ್ಯ-ವಸ್ತು! ಅಂತರಂಗದ ಲಾಕುಳ! ಯೋಗಸಿದ್ಧಿಯ ಸಾಧನೆ!

“ ಓ ನಿಃಕಳಂಕ ಮಲ್ಲಿಕಾರ್ಜುನಾ ತಕ್ಕೊಳ್ಳಿಸ್ವಾಮೀ! ನಿಮ್ಮ ಒಡವೆ! ನೀವೆಲ್ಲರೂ ತಕ್ಕೊಳ್ಳಿರಿ; ನಿಃಕಳಂಕ ಮಲ್ಲಿಕಾರ್ಜುನ ನೀವಾಗಿ ಕೃಪೆದೋರಿದಿರಿ. ಹಿಡಿಯಿರಿ, ಈ ಕನಕದಂಡ ತಕ್ಕೊಳ್ಳಿರಿ.........”

ಮಾರಯ್ಯನವರ ನಲಿವು ಮೇರೆ ಮೀರಿ, ಭಾವ ಉಕ್ಕೇರಿ, ತನುವು ಪುಳುಕಿತವಾಗಿ ಪರಮಾನಂದದ ನೆರೆಬಂದು ಹೊರಗನೆ ಮರೆದು, ಅವರು ಲಿಂಗಣಗುಣಿದು ಗಣತಿಂತಿಣಿಯ ಸುತ್ತು-ಒಳಗೆ ಓಡಾಡಿ ಎಲ್ಲರಿಗೂ ಕಟ್ಟಿ

ಗೆಯ ಕೋಲು ಕೊಟ್ಟು ಓಲಾಡಿದರು. ಜಂಗಮರು ಆದರದಿಂದ ಕೈಕೊಂಡರು. ಅದೊಂದು ಅನಿರೀಕ್ಷಿತ ಶಿವಲೀಲೆಯನ್ನು ನೋಡಿದಂತೆ ಮುಗ್ಧರಾಗಿ ನೋಡಿದರು. ಉಘೇ ಉಘೇ ಎಂದರು. ಸುವರ್ಣದ ಸಂದರ್ಭದ, ಸುವರ್ಣದ ಕೋಲುಗಳಿವೆಂದು ಉದ್ಗರಿಸಿದರು. ಇದು ಪ್ರಸಾದದ ಪರಮಸ್ವರೂಪವೆಂದು ಸ್ವೀಕರಿಸಿದರು.

ಆಗ ಮಾರಯ್ಯನವರು ಮಹಾದೇವಿಯಮ್ಮನವರು ಮಹಿಗೆ ಮೈಯಿಕ್ಕಿ ದಂಡಪ್ರಣಾಮಗೆಯ್ದಿದ್ದರು. 'ಏಳಿ ಶರಣರೆ, ಏಳಿ ತಾಯಿ' ಎಂದು ಹರಸುತ್ತ ಜಂಗಮರು ಬೀಳ್ಕೊಂಡು ನಡೆದರು.

ಮಹಮನೆಯ ಕಡೆಗೆ ಹೋದ ಜಂಗಮರಿಂದ ಇಲ್ಲಿ ನಡೆದುದೆಲ್ಲ ಬಸವಣ್ಣನವರಿಗೆ ವರದಿಯಾಯಿತು. ಮಾರಯ್ಯನವರ ಸರ್ವತ್ರ ಸಮಭಾವ ಕಾಯಕಗೌರವ, ಅದ್ಭುತಭಕ್ತಿ ಮೇರುವಿನಂತೆ ಅವರ ಮುಂದೆ ಬಂದವು. ಅಣ್ಣನವರು ತಮ್ಮ ನಡತೆಗಾಗಿ ನಾಚಿಕೆಪಟ್ಟುಕೊಂಡರು. ತಮ್ಮ ತಪ್ಪು ಘುತ್ತೆಂದು ಎದುರು ನಿಂತಿತು. ಚಿಂತೆ ತಲೆ ಸುತ್ತುತ್ತಿತ್ತು. ಕಳವಳಕ್ಕೊಳಗಾಗಿ ತಡವರಿಸುತ್ತ ಮಾರಯ್ಯನವರ ಮಠಕ್ಕೆ ಓಡಿಬಂದರು; ಮಾರಯ್ಯನವರ ಕಾಲಿಗೆರಗಿ

"ದೇವಾ ಮರವೆಯ ಮರುಳು ನಾನು, ಕಾಪಾಡಬೇಕು" ಎಂದು ಬೇಡಿಕೊಂಡರು. ಮಾರಯ್ಯ ಹಿಡಿದೆತ್ತಿ ತಿಳಿನಗೆ ತೇಲಿಸಿ ನುಡಿದರು:

"ಬಸವರಸ, ಇಂತು ನುಡಿವುದೇ? ಬಡಭಕ್ತರಾದ ನಮ್ಮನ್ನು ಕರುಣೆಯಿಂದ ಸಲಹಿದಿರಿ; ಕೀರ್ತಿಶಾಲಿಗಳಾದಿರಿ!"

"ತಪ್ಪಿದೆ ದೇವಾ ತಪ್ಪಿದೆ; ಕ್ಷಮಿಸು ತಂದೆ. ನಿನ್ನ ನುಡಿ ಕಟಕಿಯಾದರೂ ನನ್ನ ಮನದ ಕಾಳಿಕೆಯ ಮುಸುಕು ಕಳೆದಿದೆ."

ಎಂದು ಮತ್ತೆ ಎರಗಲು ಮಾರಯ್ಯ ಅವರನ್ನು ಬಿಗಿದಪ್ಪಿ ಕಂಠ ಬಿಗಿದು ನುಡಿದರು:

"ಬಸವಣ್ಣ, ಬಸವರಸ. ಬಸವತಂದೆ ನಿನಗಿದೆಂತಹ ಮರವೆ? ಕೊಡುವ ಬೇಡುವರಾರು? ಬಡತನ ಒಡೆತನ ಎಲ್ಲಿಯದು? ಒಡವೆ ಎಲ್ಲವೆಲ್ಲವು ಶಿವನ ಸೊಮ್ಮು! ಮಾಡುವ ಭಕ್ತ ನಡೆವಲ್ಲಿ ಎಡಹಬಹುದು. ಭಕ್ತ ತಪ್ಪಿದರೆ ಒಪ್ಪಗೊಟ್ಟು ಬೆಳಗಬಹುದು. ಮಾಡುವ ಮಾಟದೊಳಗೆ ತಪ್ಪಿಪ್ಪ ನಿನ್ನ ಒಪ್ಪಕ್ಕೆ ನಮೋ ನಮೋ ಎಂಬೆ"

ಎನ್ನುತ್ತ ಮಾರಯ್ಯ ಅಣ್ಣನವರ ಪಾದಕ್ಕೆ ಎರಗಿದರು. ಬಸವಣ್ಣನ ವರು ಗಡಬಡಿಸಿ ಎತ್ತಿದರು. ಒಬ್ಬರನ್ನೊಬ್ಬರು ಮತ್ತೆ ಅಪ್ಪಿದರು.

ಸನಿಹದಲ್ಲಿ ಕೈಮುಗಿದು ನಿಂತಿದ್ದ ಮಹಾದೇವಿಯಮ್ಮನು, ಬಸವಣ್ಣ ತನ್ನತ್ತ ನೋಡಿದಾಗ 'ಶರಣು ಅಣ್ಣಾ' ಎಂದಳು. ಬಸವಣ್ಣನವರು 'ಶರಣು ಶರಣಾರ್ಥಿ ಅಮ್ಮನವರೇ!' ಎಂದು ಕೈಜೋಡಿಸಿದರು. ಆಗ ಮೂವರ ಕಣ್ಣು ಗಳಲ್ಲಿಯೂ ಆನಂದಾಶ್ರು ಚಿಮ್ಮಿತ್ತು.

ಅದು ಬೇಗಿನ ಹೊತ್ತು ಸೂರ್ಯ ಕೆಳಕ್ಕಿಳಿಯುತಲಿದ್ದ. ಬಾಂಧ ರೋಣಿಯ ಶರಣರೆಲ್ಲ ಅಣ್ಣನವರ ಅನಿರೀಕ್ಷಿತ ಆಗಮನವೆಂದು ಕುತೂಹ ಲದಿಂದ ಬಂದು ನೆರೆದಿದ್ದರು. ಅವರಲ್ಲಿ ಹಲವರು ಶಿವಾನುಭವಗೋಷ್ಠಿಗಾಗಿ ಬಸವಣ್ಣನವರೊಡನೆ ಮಹಮನೆಯ ಕಡೆಗೆ ನಡೆದರು.

# ೧೨. ಅನುಭಾವ ಸದ್ಗೋಷ್ಠಿ

ಮಾರಯ್ಯನವರ ಮಠದ ಅಂಗಳದಲ್ಲಿಯು ಬಾಂಧವರ ಗೋಷ್ಠಿ ನಡೆ ಯುವದರಲ್ಲಿತ್ತು. ವಿಷಯ ನಿಶ್ಚಲ ಭಕ್ತಿ! ಮಾರಯ್ಯನವರು ಕೊನೆಗೆ:

"ಷಡಗರಿಸುವಲ್ಲಿ ಲಿಂಗವ ನೆನೆದು
ಕಡುದುಃಖದಲ್ಲಿ ಲಿಂಗವ ಮರೆದು
ಇಂತೀ ಅಂಗಲಿಂಗಸಂಗವ ಮಾಡುವ ಪರಿ ಇನ್ನೆಂತುಂಟೋ?
ಕೊರ್ತಡೆ ಭಕ್ತಿ; ತಾಪತ್ರಯಕ್ಕೆ ಪಾಪಿ.
ಸುಖದುಃಖವೆಂಬ ಉಭಯವ ಭೇದಿಸಿ ನಿಂದವಂಗೆ ಸುಖನಿಶ್ಚಯದಿಂದ;
ನಮೋ ನಮೋ ಎಂಬೆ ನಿಃಕಳಂಕ ಮಲ್ಲಿಕಾರ್ಜುನಾ."

ಈ ವಚನ ಪಠಿಸಿ ಅದರಲ್ಲಿಯೇ ಮತ್ತೆ ಮುಕ್ತಾಯವನ್ನು ಸೂಚಿಸಿ ಸಹ ಭಕ್ತರನ್ನು ವಂದಿಸಿದರು. ಬೈಗಿನ ಹೊತ್ತಿನ ಕಾಯಕಕ್ಕೆ ಇನ್ನು ಹೋಗಡ ಬೇಕು. ಮಹಾಲಿಂಗನು ಮುಂದೆ ಬಂದು ಎಂದನು: "ಅಯ್ಯನವರೆ ಇಂದು ಮಹಮನೆಗೆ ಬರಲಿಕ್ಕಾಗದು ನನಗೆ! ಹೊಲದಲ್ಲಿ ಕೆನೆ ತುಳಿಸುವದಿದೆ."

"ಆಗಲಿ ಅಣ್ಣಾ ಕಾಯಕ ನಡೆಯಬೇಕಲ್ಲಾ" ಎಂದು ಉತ್ತರಿಸು ವಾಗ ಮಾರಯ್ಯ ಮಂದಸ್ಮಿತರಾಗಿದ್ದರು. ಅದನೋಡಿ ಮಹಾಲಿಂಗನು ಮನಸ ದೆರೆದು ಮಾತನಾಡಿದನು:

"ನೀವೇನೋ ಈಗ ಹೀಗೆನ್ನುತ್ತೀರಿ. ಆದರೆ ನಿನ್ನೆ ಹೇಳಿದ ನಿಮ್ಮ ವಚನ ನನಗೆ ನೆನಪಾಗುತ್ತದೆ.

"ಕಾಯದ ಕೈಯಲ್ಲಿ ಲಿಂಗಪೂಜೆ, ಮನದ ಕೈಯಲ್ಲಿ ಸಂಸಾರ!
ಎಂತಹದಯ್ಯಾ ಲಿಂಗಪೂಜೆ?
ಎಂತಹದಯ್ಯಾ ಜಂಗಮಪೂಜೆ?
ಇಂತಪ್ಪ ನಾಚಿಕೆಗೆಟ್ಟ ಮೂಕೊರೆಯರ ತೋರದಿರಾ ನಿಃಕಳಂಕ ಮಲ್ಲಿಕಾರ್ಜುನ.

ಈ ನಿಮ್ಮ ವಾಣಿಯಂತೆ ಸಂಸಾರ ಬಿಡದ ಬದ್ಧನೇ ನಾನಾಗಿದ್ದೇನೆ."

"ಹಾಗಲ್ಲಣ್ಣಾ, ಸರ್ವರೂ ನೆನೆದು ನೆನಪಿಟ್ಟುಕೊಂಡು ನಡೆಯುವ ಮಾತು ಅದು. ನೀನು ಮಾಡುವ ಕಾಯಕ ನಿನಗಾಗಿ ನಿನ್ನ ಮಡದಿಮಕ್ಕ

ಳಿಗಾಗಿ ಅಲ್ಲವಪ್ಪೇ! ಶಿವನಿಗಾಗಿ ಜಂಗಮದಾಸೋಹಕ್ಕಾಗಿ ಇದೆ. ಅದನ್ನು
ಅಗತ್ಯವಾಗಿ ಮಾಡಬೇಕು: ಮೊದಲು ಮಾಡಬೇಕು. ಇಂದು ಪ್ರಭುದೇವ
ಕೊನೆಯ ದಿನದ ಸಂದೇಶವಿದೆ. ನಾನು ಹೋಗಬೇಕೆನ್ನುತ್ತೇನೆ ಅಪ್ಪೇ! ನಾಳೆ
ಅವರು ಕಲ್ಯಾಣದಿಂದ ನಿರ್ಗಮಿಸುವರು.

"ಒಳ್ಳೆಯ ಸಮಯ ಕಳೆದುಕೊಳ್ಳುತ್ತೇನೆ ಅಯ್ಯನವರೇ, ಏನು
ಮಾಡಲಿ?

"ಹೊಲಕ್ಕೆ ಹೋಗು ಮತ್ತೇನು ಮಾಡುವದು? ಕಾಯಕ ಮೊದಲು
ಹಂಬಲ ನಿಜವಾದರೆ ಪ್ರಭು ನಿನ್ನೊಡನೆಯೇ ಇರುವ ನಾನೂ ಹೊರ
ಹೊತ್ತೆ ಪೇಟೆಗೆ! "

"ಆಗಲಿ ಅಯ್ಯನವರೇ, ಶರಣು. ಶರಣು."

ಮಹಾಲಿಂಗ ಮನೆಯಕಡೆಗೆ ಮಾರಯ್ಯ ಪೇಟೆಗೆ ನಡೆದರು. ಮಹಾ
ದೇವಿಯಮ್ಮನವರ ಹತ್ತಿರ ನಾಲ್ಕಾರು ಶರಣೆಯರು ಇನ್ನೂ ಕುಳಿತಿದ್ದರು
ಮತ್ತೆ ಹತ್ತುಜನ ತಾಯಿಗಳು ಬಾಂಧವರೋಣಿಯಿಂದ ಬಂದರು.

"ಅಮ್ಮನವರು ಹಿತವಚನ ಕೇಳಿಸಬೇಕು." ಎಂದು ಸಜ್ಜನೆ ವೃದ್ಧೆ
ಯೊಬ್ಬಳು ಕೈಮುಗಿದು ಬಿನ್ನವಿಸಿದಳು.

"ಬನ್ನಿ ಕುಳ್ಳಿರಿ, ನಿಮ್ಮ ಮಗಳು ನಾನೇನು ಹೇಳಲಿ ಅವ್ವಾ ನಿಮಗೆ
ಪ್ರೀತಿಯಿಂದ ಕೇಳುವಿರಿ; ಮಹಾನುಭಾವರ ಮಾತನ್ನೇ ತಿಳಿದಷ್ಟು ಹೇಳುವೆ
ಕೇಳಿರಿ.

"ಪೂಜಿಸುವವರ, ಕಂಡವರ ಕಂಡು ಆ ಗುಣವ ತಾ ಕೈಕೊಂಡು. ಪೂಜಿಸು
ವಾಗ್ಬ್ರಹ್ಮವ ನುಡಿವವರ ಕಂಡು ವಿಶೇಷವನ್ನು ಈಚೆಯಲ್ಲಿ ನುಡಿಯ
ತನ್ನ ಸ್ವಯಾನುಭಾವ ಪೂಜೆ, ತನ್ನ ಸ್ವಯಂಸಿದ್ಧವಾದ ನುಡಿ
ಇಂತೀ ಉಭಯಸ್ಥಲ ಒಂದುಗೂಡಿ ಕ್ಷೀರನೀರಿನಂತೆ
ಹೊರಯಿಲ್ಲದೆ ವರ್ಣಭೇದವಿಲ್ಲದೆ ಕೂಡಬೇಕು-
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ"

"ನಿಜವಮ್ಮಾ, ಒಬ್ಬರನ್ನು ಕಂಡು ಇನ್ನೊಬ್ಬರು ಲಿಂಗಪೂಜಕರಾದ
ಮಾತ್ರಕ್ಕೆ ಏನು ಫಲ? ಅದರ ತತ್ವ ಅರ್ಥ ತಿಳಿದು ಲಿಂಗ ಧರಿಸಬೇಕು.
ಸ್ವಯವಾದ ಭಾವನೆಯನ್ನು ಅನುಭವಿಸಿ ಬೆರೆದು ಪೂಜಿಸಬೇಕು" ಎಂದ

ಳೊಬ್ಬ ಶರಣೆ ತಾಯಿ; ಇನ್ನೊಬ್ಬ ತಾಯಿ ಉಳಿದರ್ಧಕ್ಕೆ ವಿವರಣೆ ನೀಡಿದಳು:

"ಅದರಂತೆ ಬಾಯಿಯಿಂದ ಬ್ರಹ್ಮದ ಮಾತು ಆಡಿದರೂ ಫಲವಿಲ್ಲ. ಅನುಭವಕ್ಕೆ ಅಳವಟ್ಟು ಒಳಬಗೆಯಲ್ಲಿ ಒಂದಾಗಿ ತಾನೆಂಬುದಿಲ್ಲದಾದಾಗ ಅದು ಆಡಬಾರದ ಸಿದ್ಧವಾದ ನುಡಿ"

ಮಹಾದೇವಿಯಮ್ಮ ಮತ್ತೆ ಹೇಳಿದಳು:

"ಎಸೆವರ ಬಲ್ಲೆ; ಎಚ್ಚ ಬಾಣವ ತಿರುಗಿ ಬಪ್ಪಂತೆ ಎಸೆವರ ಕಾಣೆ!
ಪೂಜಿಸುವವರ ಬಲ್ಲೆ; ಪೂಜಿಸಿದ ಲಿಂಗ ಅಭಿಮುಖವಾಗಿ
ಸರ್ವಾಂಗದಲ್ಲಿ ವೇಧಿಸುವವರ ಕಾಣೆ!
ನುಡಿಗೆ ನಡೆ, ಆ ನಡೆಗೆ ನುಡಿ, ಉಭಯವ ಭೇದಿಸುವರ ಕಾಣೆ!
ಈ ಉಭಯವು ಸಿದ್ಧಿಯಾಗಿ ಸಿದ್ಧಾಂತವಾದಲ್ಲಿ ಎನ್ನಯ್ಯ ಪ್ರಿಯಇಮ್ಮಡಿ
ನಿಃಕಳಂಕ ಮಲ್ಲಿಕಾರ್ಜುನನು ಕ್ರೀಜ್ಞಾನ ನಿರುತವಾದಂಗಲ್ಲದೆ ಸಾಧ್ಯವಿಲ್ಲ!"

ಎನ್ನುತ್ತ ಮಹಾದೇವಿಯಮ್ಮ ಮುಖವೆತ್ತಿದಾಗ ಅಂಗಳದಂಚಿಗೆ ಬಂದಿದ್ದ ಲಿಂಗಮ್ಮ ಶರಣೆಯರನ್ನು ಕಂಡಳು. ಕೂಡಲೆ ಮೇಲೆದ್ದು ಕೈಮುಗಿದು "ಶರಣು ಶರಣಾರ್ಥಿ, ಬನ್ನಿರಿ ಅವ್ವಗಳಿರಾ" ಎನ್ನುತ್ತ ಅವಸರದಿಂದ ನೀರು ತಂದಿತ್ತಳು. ಮಹಿಳೆಯರೆಲ್ಲ ಎದ್ದು ನಿಂತುದನ್ನು ಗಮನಿಸಿ ಲಿಂಗಮ್ಮ ಕೈಮುಗಿದು ಕೂಡ್ರಹೇಳಿ, ಮಹಾದೇವಿಯಮ್ಮನನ್ನು ಕುರಿತು "ನಿಮ್ಮ ಪ್ರಸಾದವಾಣಿಗೆ ಎಳಸಿ ಬಂದೆವು ಮಾತೇಕೆ ನಿಲ್ಲಿಸಿದಿರಿ? ಈ ಮರಾಮರಿಕೆ ಏಕೆ ತಾಯಿ? ನಿಮ್ಮ ವಚನಾಮೃತದ ಆಸೆ ನಮಗಿದೆ" ಎನ್ನುತ್ತ ಜತೆಯ ಶರಣೆಯರಿಬ್ಬರೊಡನೆ ಮುಖಪಾದಗಳನ್ನು ತೊಳೆದುಕೊಂಡು ಭಸ್ಮಧರಿಸಿಕೊಂಡುಕುಳಿತರು.

"ನನ್ನ ವಚನವೇ ಅವ್ವಾ? ನಿಮ್ಮುದರದ ಹಸುಳೆ, ನಿಮ್ಮೆದೆಯ ಅಮೃತವನುಂಡು ಬೆಳೆದ ಬಾಲೆ ನಾನು! ಈಗ ಎಳಗಂದಿಯಂತೆ ಕರುಣಿಸಿ ಇಷ್ಟುದೂರ ಬಿಜಯಂಗೈದಿರವ್ವಾ?"

"ಶಿವಪುರದಾಚೆಯ ಹಳ್ಳಿಯಲ್ಲಿ ಶಿವಮೂರ್ತಿ ಮಠದಲ್ಲಿ ಲಿಂಗದೀಕ್ಷಾ ಸಮಾರಂಭವಿತ್ತು. ಹೋಗಬೇಕಾಗಿತ್ತು. ಮರಳಿ ಬರುವಾಗ ನಿಮ್ಮ ದರ್ಶನಕ್ಕೆಂದು ಈ ದಾರಿಯಿಂದ ಬಂದೆವು.

"ನನ್ನ ಪುಣ್ಯ ಅವ್ವಾ!" ಹರುಷವುಕ್ಕಿ ನುಡಿದಳು ಮಹಾದೇವಿ.

ಆ ವೃದ್ಧೆ ಮತ್ತೆ ಎದ್ದು ಲಿಂಗಮ್ಮನಿಗೆ ಕೈಮುಗಿದು "ನೀವು ನಿಮ್ಮ ಅಮೃತವಾಣಿಯ ಕೇಳಿಸಬೇಕು ತಾಯೀ" ಎಂದಳು.

"ನಾವು ಹೇಳಬಂದಿಲ್ಲ ಅಜ್ಜೀ! ಕೇಳಬಂದವರು. ನಿಮ್ಮಮ್ಮನವರ ವಾಣಿಯನ್ನು ಆಲಿಸೋಣ. ಅವರಂತರಂಗದ ಘನವ ಅರಿಯಲು ಆಸದಳ"

"ಹೌದು ತಾಯೀ, ಅವರು ಬಾಂಧವರೋಣಿಯ ಬಾಂಧವರ ಹಳ್ಳಿಗಳ ಭಾಗ್ಯದೇವತೆ! ಮಾರಯ್ಯ ತಂದೆ ಸಾಕ್ಷಾತ್ ಶಿವ! ನೀವಾದರೂ ಏನು! ಅಪ್ಪಣ್ಣ ತಂದೆಗಳ ಅನುಭಾವದ ಪ್ರತಿಮೂರ್ತಿ. ನಿಮ್ಮ ದರ್ಶನ ನಮಗೆ ಅಪರೂಪ; ಆದ್ದರಿಂದ ಈಗ ನೀವೇ ಅಪ್ಪಣೆ ಕೊಡಿಸಬೇಕು."

"ಹೌದು ಅವ್ವನವರೇ" ಮಹಾದೇವಿಯಮ್ಮನೂ ಆಗ್ರಹಪಡಿಸಿದಳು.

"ಆಗಲಿ ನಾನೇ ಮೊದಲು ಹಾಡುವೆ.:

ರಸ ಒಡೆದಂತೆ ದೆಸೆದೆಸೆಯನಾಲಿಸುವ ಮನವ
ತನ್ನ ವಶವಮಾಡಿ ನಿಲಿಸಿ, ಹುಸಿಯ ಬಿಟ್ಟು
ಮಾಯೆಯ ಬಲೆಯ ನುಸುಳಿ ನಿಶ್ಚಿಂತನಾಗಿ
ವೀರಧೀರನಾದಲ್ಲದೆ ಆ ಮಹಾಘನವ ಕಾಣಬಾರದು
ಎಂದರು ನಮ್ಮ ಅಪ್ಪಣ್ಣ ಪ್ರಿಯ ಚೆನ್ನಬಸವಣ್ಣ"

"ನಿಜ ನಿಜ ತಾಯಿ, ಬರಿಯ ಆಡಿದರಾಗದು ಕೇಳಿದರಾಗದು" ಆ ಹಿರಿಯಳು ಹಿಗ್ಗಿ ಚಪ್ಪಾಳೆ ತಟ್ಟನುಡಿದಳು. 'ಮತ್ತೆ ಹೇಳಿರಿ' ಎಂದಳು.

"ಮುಕ್ತಿಯ ಪಥವನರಿವುದಕ್ಕೆ ತತ್ವದ ಭಿತ್ತಿಯ ಕಾಣಬೇಕು.
ಚಿತ್ತ ಲಿಂಗದಲ್ಲಿ ಅಚ್ಚೊತ್ತಿದಂತಿರಬೇಕು.
ಮರ್ತ್ಯದ ಮಾನವರ ಸಂಗ ಹಿಂಗಬೇಕು.
ತಾನು ತಾನಾದ ಲಿಂಗೈಕ್ಯವನರಿವಡೆ ಅಪ್ಪಣ್ಣ ಪ್ರಿಯ ಚೆನ್ನಬಸವಣ್ಣ

"ಸತ್ಯದ ಮಾತಿದು, ಮರ್ತ್ಯದ ಮಾನವರ ಸಂಗದಿಂದ ಭವದುಃಖದ ಬೆಳೆಗೆ! ಅನುಭಾವಿಗಳ ಸಂಗದಿಂದ ಪರಮಾನುಭಾವ" ಮಹಾದೇವಿಯಮ್ಮನವರ ಉದ್ಗಾರವಿದು.

"ಹೌದು ಮಾತಾಯೀ! ಮಾರಯ್ಯ ತಂದೆಗಳೂ ಹೇಳುತ್ತಾರೆ: 'ದೃಢಚಿತ್ತಂಗೆ ಕಡೆಮೊದಲಿಲ್ಲ' ವೆಂದು ಎಂದಳು ಅಜ್ಜಿ.

"ಭಕ್ತಿಯಲ್ಲಿ ಬಲೆ, ಚಿತ್ತದಲ್ಲಿ ಕತ್ತಲೆ ಇದ್ದವರಿಗೆ ಇನ್ನೆಲ್ಲಿಯದೋ ಭಕ್ತಿ ಶೀಲ? ಎಂತಲೂ ಹೇಳುತ್ತಾರೆ ಆ ಅಪ್ಪನವರು" ಎಂದಳು ಇನ್ನೊಬ್ಬ ಶರಣೆತಾಯಿ.

"ಇನ್ನು ನೀವು ಅಪ್ಪಣೆ ಕೊಡಿಸಿರಿ ಅಮ್ಮನವರೇ" ಎಂದು ಲಿಂಗಮ್ಮ ಬಿನ್ನವಿಸಿದರು. ಮಹಾದೇವಿಯಮ್ಮ ಹೇಳಿದರು:

"ಸಂಸಾರ ಸಾಗರದಿಂದ ಉದಿಸಿದ ಸುಖವೇ ದುಃಖವೆಂದರಿಯದೆ
ಆ ಸುಖವನೆ ಮೆಚ್ಚಿ, ಭವದುಃಖವೆಂಬ ಕ್ರೂರ ಜನ್ಮಚಕ್ರಕ್ಕೀಡಾಗಿ
ಅಲ್ಲಿ ತನ್ನ ಮರೆದು, ತನಗಿಲ್ಲದ ಭ್ರಮೆಯ ತನ್ನದೆಂದು
ಅಂತಪ್ಪ ಘೋರದೊಳಗೋಲಾಡುತಿಪ್ಪ ಮುಳುಗಾಡುತಿಪ್ಪ
ಅಜ್ಞಾನಿ ಜೀವಿಗಳು ನಿಮ್ಮನೆತ್ತ ಬಲ್ಲರಯ್ಯಾ?
ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ"

"ನೋಡಿರವ್ವಾ ನೋಡಿರಿ ಆನಂದ ಆನಂದ! ಅಜ್ಞಾನಿಗಳೇನು ಬಲ್ಲರು?" ಎನ್ನುತ್ತ ಕೈ ಮುಗಿಯುತ್ತಿದ್ದಳು ಅಜ್ಜಿ.

ಈ ಗೋಷ್ಠಿ ಮುಂದೊಂದುಗಳಿಗೆ ನಡೆದಿರುವಷ್ಟರಲ್ಲಿ ಮಾರಯ್ಯ ಬಂದರು. ಅವರು ಲಿಂಗಮ್ಮ ಪರಸ್ಪರ ಶರಣು ಮಾಡಿ ಗೌರವ ಸಲ್ಲಿಸಿದರು. ಬಳಿಕ ಆ ಶರಣ ಶರಣೆಯರು ಮಹಮನೆಗೆ ನಡೆದರು.

ಅಂದು ಪ್ರಭುದೇವರ ಕೊನೆಯ ಪ್ರವಚನ, ಕೊನೆಯ ದರ್ಶನ! ಜನ ಕಿಕ್ಕಿರಿದು ತುಂಬಿತ್ತು. ಶರಣರಿಗೆಲ್ಲ ಒಂದೇ ಕಾತರ! 'ನಾಳೆ ನಮಗೆ ಈ ಅಮೃತವಾಣಿ ಇಲ್ಲ; ಅವರ ಮೈಮನ ಭಾವಗಳು ಪ್ರಭುವಿನ ಪ್ರವಚನ, ಪಿಯೂಷದಲ್ಲಿ ಮೀಯುತ್ತಿದ್ದರೂ ಆ ಕಳವಳ ಅಳಿಯಲೊಲ್ಲದು. ಜ್ಞಾನ-ವೈರಾಗ್ಯ-ಯೋಗಗಳ ಕೇವಲಾನಂದದ ಮಹಾಶಿವಯೋಗಿಯನ್ನು ತಡೆದು ನಿಲ್ಲಿಸಿಕೊಳ್ಳುವದಕ್ಕೆ ಯಾರು ಶಕ್ತರಾದಾರು? ಮಂಗಲದ ಮೊದಲು ಪ್ರಭುದೇವರು ತಮ್ಮ ನಿರಂಜನ ಪೀಠದ ಅಧಿಕಾರವನ್ನು ಚೆನ್ನಬಸವಣ್ಣನವರಿಗೆ ಒಪ್ಪಿಸಿಕೊಟ್ಟರು.

ಮರುದಿನ ನಸುಕಿನಲ್ಲಿ ಪ್ರಭುದೇವರನ್ನು ಬೀಳ್ಕೊಡಲು ಪ್ರಮಥಗಣವೆಲ್ಲ ಬಂದು ನೆರೆದಿದ್ದರು. ಅವರ ಪಾದಗಳನ್ನು ಪೂಜಿಸಿ ಮಂಗಲ ಹಾಡಿದರು. ಬಸವಣ್ಣ, ಚೆನ್ನಬಸವಣ್ಣ, ಮಾಚಿದೇವ, ನಾಗಲಾಂಬಿ ಮುಂತಾದವರು ತಮ್ಮ ತಮ್ಮ ಗೀತಮಾತುಗಳಿಂದ ಪ್ರಭುವನ್ನು ಸ್ತುತಿಸಿದರು. ಹಾಗೆ ಸ್ತುತಿಸಿ ಪ್ರತಿಯೊಬ್ಬರು ವಂದಿಸಿದಾಗ ಪ್ರಭುದೇವರು ಅವರವರ ಯೋಗ ವೈಶಿಷ್ಟ್ಯವನ್ನು ನೆನೆದು ಹರ್ಷಭರಿತರಾಗಿ ನುಡಿದು ಸ್ಮೈದಡವಿ ಆಶೀರ್ವದಿ

ಸುತ್ತಿದ್ದರು. ಆಗ ಮಾರಯ್ಯನವರೂ ಅವರಡಿಯಲ್ಲಿ ಗುರುವನ್ನೇ ಕಾಣುತ್ತ ಮನವುಬ್ಬಿ ಮುದವೇರಿ ಈ ಪ್ರಕಾರ ಸ್ತೋತ್ರಮಾಡಿದರು:

"ನೆನಹಿನ ನಿಧಿಯು ನೋಡಾ ಎನ್ನ ಅರಿವಿನ ಘನವನೋಡಾ
ಅಹಾ ಎನ್ನ ಪುಣ್ಯವೇ ಆಹಾ ಎನ್ನ ಭಾಗ್ಯವೇ
ಅಹಾ ಎನ್ನ ಕಂಗಳ ಮನೆಯ ಮಾಡಿಕೊಂಡಿಪ್ಪ ನಿತ್ಯದ ಬೆಳಗೆ.
ಎನ್ನಧ್ಯಾನದೊಳಗಣ ದೃಢವೇ ಎನ್ನ ಸುಖದೊಳಗಣ ಸುಗ್ಗಿಯೇ
ನಿಃಕಳಂಕ ಮಲ್ಲಿಕಾರ್ಜುನಾ ನಿಮ್ಮ ಶರಣ
ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು."

ಎಂದು ಅಡಿಗೆ ಪೊಡಮಟ್ಟ ಮಾರಯ್ಯನನ್ನು ಪ್ರಭು ಕೈಹಿಡಿದೆತ್ತಿ
"ಲೋಕಕ್ಕೆ ಅಪೂರ್ವಾದರ್ಶವನ್ನು ನೀಡಿದ ಮಹಾನುಭಾವ
ಕಾಯಕ ಯೋಗಿ ದಾಸೋಹ ದೀಪ್ತಿ
ಗುಹೇಶ್ವರನ ಶರಣ ಮಾರಯ್ಯನವರ ಅರಿವಿಂಗೆ ಶರಣು ಶರಣು"
ಎಂದರು.

ಪ್ರಭುದೇವರು ಪೀಠದಿಂದೇಳುವ ಮುನ್ನ ಕೊನೆಯದಾಗಿ ಬಸವೇಶ ಮತ್ತೊಮ್ಮೆ ಅವರ ಅಡಿಗೆ ಮುಡಿಯಿಟ್ಟನು. ಪ್ರಭು ಕರುಣೆಯ ಕಿರಣ ಸೂಸುವ ಕಣ್ಣಿನಿಂದ ನೋಡಿ ಕರಪಿಡಿದೆತ್ತಿ ಆಲಿಂಗಿಸಿ ನುಡಿದರು.

"ಕುಂಡಲಿಗ ಕೀಟದಂತೆ ಮೈ ಮುಟ್ಟಾಗದೆ
ಜಲದೊಳಗಣ ತಾವರೆಯಂತೆ ಹೊದ್ದಿ ಹೊದ್ದದೆ
ಸಾಗರದ ಮೌಕ್ತಿಕದಂತೆ ಜಲವು ತಾನಾಗದೆ
ಇರ್ದೆಯಲ್ಲಾ ಗುಹೇಶ್ವರ ಲಿಂಗದಾಣತಿವಿಡಿದು.
ತನುಗುಣ ಮತ್ತರಾಗಿರ್ಪ ಐಶ್ವರ್ಯಾಂಧಕರ
ಮತವನೇನ ಮಾಡಬಂದೆಯಯ್ಯಾ ಬಸವಣ್ಣಾ?"

ಶರಣಶರಣೆಯರು ನಗರದ ಹೊರಗೆ ನಿರಂಜನಮೂರ್ತಿ ಶ್ರೀಅಲ್ಲಮ ಪ್ರಭುದೇವರನ್ನು 'ಹರಹರ ಮಹಾದೇವ' ಎನ್ನುತ್ತ ಬೀಳ್ಕೊಟ್ಟರು. ಜತೆಗೆ ಯಾರನ್ನೂ ಒಲ್ಲದೆ ಪ್ರಭು ತಾವೊಬ್ಬರೇ ನಡೆದು ಬಿಟ್ಟರು. ಕಲ್ಯಾಣದ ಕಟ್ಟೆಯೊಡೆದು ಅಧ್ಯಾತ್ಮಿಕ ಸಂಪತ್ತು ಹರಿದು ಹೋದಂತಾಯಿತು ಪ್ರಮಥರಿಗೆ ಮೌನದಿಂದ ಹಿಂದಿರುಗಿದರು. ಈ ಸನ್ನಿವೇಶಗಳಿಂದ ಪರಿಣಾಮಗೊಂಡು ಮಾರಯ್ಯನವರ ಅಂತರಂಗ ನಿನದಿಸುತ್ತಿತ್ತು:

“ಭಕ್ತಿ ಸೂತ್ರ ಬಸವಣ್ಣಂಗೆ, ಭಾವಸೂತ್ರ ಚೆನ್ನಬಸವಣ್ಣಂಗೆ
ಜ್ಞಾನ ಸೂತ್ರ ಪ್ರಭುದೇವಂಗೆ
ಇಂತು ಸ್ಥೂಲ ಕಾಯ ಬಸವಣ್ಣರಿಗೆ ಸೂಕ್ಷ್ಮಕಾಯ ಚೆನ್ನಬಸವಣ್ಣಂಗೆ
ಕಾರಣಕಾಯ ಪ್ರಭುದೇವಂಗೆ. (ಅರ್ಪಿತವಾಗಿ)
ಕಾಯ ಬಸವಣ್ಣನಾಗಿ ಜೀವ ಚೆನ್ನಬಸವಣ್ಣನಾಗಿ
ಉಭಯದರಿವು ಪ್ರಭುದೇವರಾಗಿ
ಇಂತೀ ತ್ರಿವಿಧಪ್ರಸಾದ ಎನಗೆ ನಿಂದು ಎನ್ನ ಜನ್ಮವಾಸನೆ ಬಿಡಿಸಿದೆ ನೋಡಾ
ಈ ವಾಸನೆ ನಿಃಕಳಂಕ ಮಲ್ಲಿಕಾರ್ಜುನಪ್ಪನಾಗಿಯಲ್ಲಿವೇ ಎನ್ನ ಭಾವ?”

ರವಿ ಮೂಡಿದ್ದ; ಕಿರಣ ಹರಡಿದ್ದ; ಕಾಯಕದ ಹೊತ್ತೆಂದು ಕೊಡಲಿಗಾಗಿ ಕುಟೀರದ ಕಡೆಗೆ ಅವಸರದಿಂದ ನಡೆದಿದ್ದರು ಮಾಚಯ್ಯನವರು. ಜತೆಗೆ ಮಹಾದೇವಿಯಮ್ಮ!

# ೧೩. ಸಾತ್ವಿಕತೆಯ ಸಂರಕ್ಷಣೆ

ಶರಣಧರ್ಮ ಉತ್ಕರ್ಷಸ್ಥಿತಿಯಲ್ಲಿತ್ತು. ಬಿಜ್ಜಳನ ಸಹಾನುಭೂತಿ ಬೆಳೆದುಬಂದಿತ್ತು. ಆದರೆ ಇದರಿಂದ ಅಸಂತುಷ್ಟವಾದ ಶಕ್ತಿಯೊಂದು ತಲೆಯೆತ್ತುತ್ತಲಿತ್ತು. ಶರಣ ಧರ್ಮದ ಆಂದೋಲನದಿಂದ ಸನಾತನಿಗಳು ಮೊದಲೇ ಕರುಃಬಿದ್ದರು. ಬಸವಣ್ಣನವರ ಕ್ರಾಂತಿಕಾರಕ ವಿಚಾರಗಳು ದೇಶದ ಮೂಲೆ ಮೂಲೆಗೆ ಮುಟ್ಟಿದುದೂ, ಎಲ್ಲ ಕಡೆಯಿಂದ ವಿಚಾರವಂತರು ಬಂದು ಸಂಘಟನೆಗೊಂಡುದೂ, ಕಲ್ಯಾಣದಲ್ಲೆಲ್ಲ ಕಾವಿಯವರು ಸಂಚರಿಸುತ್ತಿರುವದೂ, ಬ್ರಾಹ್ಮಣ ಮಂತ್ರಿ ಮಧುವರಸು ಶರಣಧರ್ಮ ಸ್ವೀಕರಿಸಿದುದೂ ಸನಾತನಿಗಳ ಸಾಂಪ್ರದಾಯಿಕ ಸಂಕುಚಿತ ಹೃದಯಗಳನ್ನು ಅದುರಿಸಿದವು. ಅವರು ವರ್ಣಧರ್ಮದ ಅಳಿಗಾಲವೆಂದು ಹುಯಿಲೆಬ್ಬಿಸಿ ಬಿಜ್ಜಳನಲ್ಲಿ ಮೊರೆಯಿಟ್ಟರು. ಚಾಲುಕ್ಯ ಸಿಂಹಾಸನದ ಅಪಹರಣಕ್ಕೆ ಯತ್ನಿಸುತ್ತಿದ್ದ ಬಿಜ್ಜಳರಾಜನು ತನ್ನ ಈ ಕಪಟ ಪ್ರಯತ್ನಕ್ಕೆ ಸತ್ಯನಿಷ್ಠರಾದ ಬಸವದಂಡನಾಯಕರಿಂದ ಬೆಂಬಲದೊರೆಯದೆಂದು ಕಂಡೊಡನೆ ಅವರ ಕೈಬಿಟ್ಟು, ಅವರಿಂದ ಅಸಂತುಷ್ಟರಾದ ಅವರ ವಿರೋಧಿಗಳ ವರ್ಗವನ್ನು ಎತ್ತಿಕಟ್ಟಿ ಆ ಜನದ ಒಲುಮೆಗಾಗಿ ಅವರಿಗೆ ಅಧಿಕಾರಗಳನ್ನು ನೀಡಿದನು. ಈ ಎರಡು ಶಕ್ತಿಗಳ ಸಂಯೋಜನೆಯಿಂದ ಶರಣಧರ್ಮಕ್ಕೆ ಆಪತ್ತು ಕಾದಿತ್ತು. ಅದನ್ನು ಎದುರಿಸಲು ಪ್ರಮುಖ ಶರಣರು ಸಿದ್ಧರಾಗಿದ್ದರು. ಅವರಲ್ಲಿ ಮಾರಯ್ಯನವರೂ ಒಬ್ಬರು.

ರಾಜ್ಯವ್ಯವಸ್ಥೆಯಲ್ಲಿ ಬಿರುಕು ಉಂಟಾದಾಗ ಕೆಲವು ದುಷ್ಟಶಕ್ತಿಗಳು ಪ್ರಕಟವಾಗುವದು ಸಹಜ! ರಾಜನ ಕಿಡುಗಣ್ಣಿಗೆ ಪಕ್ಕಾಗುತ್ತಿದ್ದ ಶಿವಭಕ್ತರ ಮೇಲೆ ಪುಂಡ ಜನರು ಅತ್ಯಾಚಾರ ನಡಿಸಿದರು. ಮತದ್ವೇಷಿಗಳು ಇದಕ್ಕೆ ಪ್ರೋತ್ಸಾಹನೆ ನೀಡುತ್ತಿದ್ದರು. ಈ ಅತ್ಯಾಚಾರಗಳನ್ನು ಮಾರಯ್ಯನವರು ಸಹಿಸದಾದರು. ತಮ್ಮ ಪ್ರಭಾವಕ್ಕೊಳಗಾಗಿರುವ ಬಾಂಧವರ

ಓಣಿಯಲ್ಲಿ-ಬಾಂಧವರ ಹಳ್ಳಿಗಳಲ್ಲಿ ಅವರು ಸಂಚರಿಸಿ ಗಣಾಚಾರದ ದಲಗಳನ್ನು ರಚಿಸಿ ಅಂತಹ ಅತ್ಯಾಚಾರಗಳನ್ನು ತಡೆಯುತ್ತಿದರು. ದಾಸೋಹದ ಭೃತ್ಯಾಚಾರದ ಜೊತೆಗೆ ಹೊತ್ತು ಬಂದಾಗ ಗಣಾಚಾರಕ್ಕೂ ತೊಡಗಬೇಕಾಯಿತು. ಅವರ ಪೂರ್ವಾಶ್ರಯದ ರಾಜತ್ವದ ರಕ್ತಗುಣ ಜಾಗ್ರತವಾಯಿತು. ಅದಕ್ಕೀಗ ಸಾತ್ವಿಕತೆಯ ಸಂರಕ್ಷಣೆ ಮಾತ್ರ ಗುರಿಯಾಗಿತ್ತು. ಕಿಡಿಗೇಡಿಗಳನ್ನು ನಿಗ್ರಹಿಸುವ ಈ ಪ್ರಯತ್ನಗಳಿಗೆಲ್ಲ ಸಂಪ್ರದಾಯವಾದಿಗಳು ಅಪಾರ್ಥ ಹಚ್ಚಿ ವರದಿ ಮಾಡಿ ರಾಜನ ತಲೆಕೆಡಿಸುವದಕ್ಕೆ ಉಪಯೋಗಿಸುತ್ತಿದ್ದರು.

ಮಧುವರಸನ ಮಗಳು ಕಲಾವತಿ, ಹರಳಯ್ಯನ ಮಗ ಶೀಲವಂತ ಇವರಿಬ್ಬರ ಮದುವೆ ನಿರ್ಣಯಿಸಲ್ಪಟ್ಟಿತ್ತು. ಶರಣ ಸಂತಾನದ ವಧೂವರರ ಮದುವೆಯನ್ನು ಬಸವರಾಜರಾದಿಯಾಗಿ ಪ್ರಮಥರು ಒಪ್ಪಿದರು. ಮದುವೆ ನಡೆಯಿತು. ಬ್ರಾಹ್ಮಣನ ಮಗಳು ಚರ್ಮಕಾರನ ಮಗ ಇವರಿಬ್ಬರ ಮದುವೆ ಅಘಟಿತ ಘಟನೆಯೆಂದು ಸನಾತನಿಗಳು ಮತ್ತಿಷ್ಟು ರೋಷಗೊಂಡು 'ಶಾಸ್ತ್ರ ವಿರೋಧ, ಸಮಾಜಕ್ಕೆ ಕೇಡು, ರಾಷ್ಟ್ರದ್ರೋಹ, ಅನುಭವಮಂಟಪದ ಅನುಚಿತ ಕಾರಭಾರ ಎಂದು ಬಿಜ್ಜಳರಾಜನಲ್ಲಿ ದೂರಿದರು. ಅಪರಾಧಿಗಳನ್ನು ದಂಡಿಸಬೇಕಲ್ಲದೆ, ಅನುಭವಮಂಟಪ ಮಹಮನೆಗಳ ಆಟವನ್ನು ತಡೆಯಬೇಕೆಂದು ಆಗ್ರಹ ಪಡಿಸಿದರು. ಬಿಜ್ಜಳನು ನಡಿಸಿದ ವಿಚಾರಣೆಯಲ್ಲಿ ಬಸವಣ್ಣನವರು ಶರಣರ ನಿಲುವೆಯನ್ನು ಸಮರ್ಥಿಸಿಕೊಂಡರು. ಆದರೂ ಬಿಜ್ಜಳನು ಹರಳಯ್ಯ-ಮಧುವಯ್ಯಗಳ ಮೇಲೆ ವರ್ಣಸಂಕರ, ಕನ್ಯಾಪಹಾರ, ವೈಶಾಚಿಕ ವಿವಾಹಗಳ ಆರೋಪವಿಟ್ಟು, ನ್ಯಾಯಪೀಠದ ಮುಂದೆ ನಿಲ್ಲಿಸಿದನು. ಶರಣರ ಉಪಟಳ(?)ವನ್ನು ತಗ್ಗಿಸುವದಕ್ಕೆಂದು ಬಸವರಾಜರಿಗೆ 'ಒಮ್ಮಿಂದೊಮ್ಮೆ ಕಲ್ಯಾಣವನ್ನು ಬಿಟ್ಟು ಸಂಗಮಕ್ಕೆ ಹೋಗಬೇಕು' ಎಂದು ಅಜ್ಞೆ ಮಾಡಿದನು.

ಶರಣಧರ್ಮಕ್ಕೆ ಗಂಡಾಂತರ ಪ್ರತ್ಯಕ್ಷವಾಗಿ ಎದುರಾಯಿತು. ಬಸವೇಶ ರಾಜಾಜ್ಞೆ ಸ್ವೀಕರಿಸಿದರು. ನಸುಕಿನಲ್ಲಿಯೇ ನಗರದ ಹೊರಗೆ ಹೋಗಿರಬೇಕೆಂದು ಕಟ್ಟಪ್ಪಣೆಯಾಗಿತ್ತು. ಅವರ ಪ್ರಯಾಣ ಮಾಡಿಸಲು ವಾಹನಗಳೊಂದಿಗೆ ದಳವೊಂದು ರಾತ್ರಿಯಲ್ಲಿಯೇ ಬಂದು ಮಹಮನೆಯ ಹತ್ತಿರ

ಬೀಡು ಬಿಟ್ಟಿತು. ಸಾಗರದಂತೆ ಗಂಭೀರಳಾಗಿದ್ದ ಅಕ್ಕನಾಗಮ್ಮ ಶರಣಾ
ವ್ಯಾಕುಲತೆಯಿಂದ ಮಹಮನೆಯ ಕಾರ್ಯಗಳು ಕುಂಠಿತವಾಗದಂತೆ ಅವ
ರಿಗೆ ಧೈರ್ಯ ಹೇಳಿದಳು. ಆಕೆ ಅವಿಕೃತಭಾವದಿಂದ ಬಸವಣ್ಣನವರಿಗೆ
ವಿಶ್ರಾಂತಿಗೊಳ್ಳಹೇಳಿ, ರಾತ್ರಿಯೆಲ್ಲ ಅವರ ಪ್ರಯಾಣದ ಸಿದ್ಧತೆಮಾಡಿದಳು.
ಬಸವೇಶ ಗಂಗಾಂಬೆಯೊಡನೆ ಆನೆಯ ಪ್ರಹರದ ಆದಿಯಲ್ಲಿ ಹೊರಟರು.
ಕಂಬನಿದುಂಬಿ, ಕಂಠಬಿಗಿದು ಮಾತು ಬಾರದೆ ನಿಂತ ಶರಣರ ವೃಂದಕ್ಕೆ
ಶರಣು ಮಾಡಿ ಬೀಳ್ಕೊಂಡರು. ರಾತ್ರಿಯಲ್ಲಿಯೇ ಅವರ ಕಲ್ಯಾಣ ನಿರ್ಗ
ಮನದ ಸುದ್ದಿ ನಗರದಲ್ಲಿ ಹೇಗೋ ಹಬ್ಬಿ ಬಿಟ್ಟಿತ್ತು. ನಸುಕಿನಲ್ಲಿಯೇ ಜನ
ಜಂಗುಳಿ ಅವರ ದರ್ಶನಕ್ಕೆಂದು ಮಹಮನೆಗೆ ಧಾವಿಸಿ ಬಂದಿತು. ಅಷ್ಟರಲ್ಲಿ
ಬಸವರಾಜರು ಹೊರಟು ಹೋಗಿದ್ದರು. ಆ ಜನರೂ ಮತ್ತೆ ಹೊಸಬರೂ
ಸೇರಿ ಬಹುದೊಡ್ಡ ಜನಸಮುದಾಯ ಅಣ್ಣನವರನ್ನು ಕಾಣುವ ಆತುರ
ದಿಂದ ಅವರು ಹೋದ ದಾರಿಗುಂಟ ಓಡಿಬರುತ್ತಿದ್ದರು. ಅವರ ಗದ್ದಲದ
ಧ್ವನಿ ನೆರೆಯ ಬೆಟ್ಟಗಳಲ್ಲಿ ಪ್ರತಿಧ್ವನಿಸುತ್ತಿತ್ತು.

ಉಷಃಕಾಲದಲ್ಲಿಯೇ ಮಾಚಯ್ಯ ತಮ್ಮ ಕುಟೀರದ ಹತ್ತಿರ ಬಸ
ವಣ್ಣ ಬರುವ ದಾರಿಯಮೇಲೆ ಬಂದು ನಿಂತಿದ್ದರು. ಬಾಂಧವರೋಣಿಯ
ಭಕ್ತಗಣವು ಭಸ್ಮಧರಿಸಿ ಹುಬ್ಬೇರಿಸಿ ಅವರ ಹಿಂದೆ ಬಂದು ನಿಂತಿದ್ದಿತು.
ಬಸವಣ್ಣನವರ ಪ್ರಯಾಣದ ದಳ ಬಂದಿತು. ದಳದ ನಾಯಕ ಮುಂದಿ
ದ್ದನು. ಮಾಚಯ್ಯ ಅವರಿಗೆ ಅಡ್ಡಲಾಗಿ ನಿಂತರು. ನಾಯಕ ಕೇಳಿದನು:

“ಏನು ನಿಮ್ಮ ಉದ್ದೇಶ? ದಂಡನಾಯಕರನ್ನು ಬಿಡಿಸಿಕೊಳ್ಳುವದೇ?”

“ಆದೇನಿಲ್ಲ, ಮೊದಲು ಅವರೇ ಬಿಡುಗಡೆಗೆ ಇಚ್ಛಿಸುವದಿಲ್ಲ.”

“ಹಾಗಾದರೆ ದಾರಿಯನ್ನೇಕೆ ಕಟ್ಟಿದಿರಿ?”

“ಬಸವರಾಜರ ನಿಷ್ಕ್ರಮಣದಲ್ಲಿ ನಾಗರಿಕರಿಗೆ ಅವರ ದರ್ಶನ ದೊರೆ
ಯಬಾರದೆಂದು ದೊರೆಯ ಇಚ್ಛೆ! ಅದನ್ನು ವ್ಯರ್ಥಗೊಳಿಸುವದು ನಮ್ಮ
ಇಚ್ಛೆ! ಹಿಂದೆ ಕೇಳುವದಿಲ್ಲವೇ ಕಲಕಲ ಧ್ವನಿ? ನಾಗರಿಕರೆಲ್ಲ ಇತ್ತ ಬರು
ತ್ತಿದ್ದಾರೆ. ಅವರಿಂದ ಬೀಳ್ಕೊಳ್ಳಬೇಕು ಬಸವರಾಜರು ಇಲ್ಲಿ”

“ಅದಕ್ಕೆ ಆಸ್ಪದವಿಲ್ಲ. ರಾಜಾಜ್ಞೆಯಂತೆ ಹೊತ್ತು ಹುಟ್ಟುವ ಮೊದಲು
ನಾಲ್ಕು ಹರದಾರಿ ಹೋಗಬೇಕು.”

"ಹಾಗೆಯೇ ಹೋಗುವದಕ್ಕೂ ಆಸ್ಪದವಿಲ್ಲ.

ನಾಯಕನು ಆವೇಶದಿಂದ ಕುದುರೆಯನ್ನು ಅಮುಚಿ ಹೊಡೆದನು. ಮಾರಯ್ಯ ಅದರ ಲಗಾಮನ್ನು ಗಟ್ಟಿಯಾಗಿ ಹಿಡಿದರು. ಆಜಾನುಬಾಹು ವಾದ ವೀರವೃದ್ಧನ ಸ್ವರೂಪಕ್ಕೆ ನಾಯಕನ ಮಗ್ಗಲಿಗೆ ಬಂದ ರಾಹುತರ ಕುದುರೆಗಳು ಬೆದರಿ ಹಿಂದೋಡಿದವು. ನಾಯಕನು ಸಿಟ್ಟಾಗಿ ಖಡ್ಗವನ್ನು ಹಿಡಿದು ಮೇಲೆತ್ತಿದನು. ಮಾರಯ್ಯ ಕುತ್ತಿಗೆಯನ್ನೊಡ್ಡಿದರು. ನಾಯಕನ ಕೈ ಕೆಳಗಿಳಿಯಲಿಲ್ಲ. ಖಡ್ಗ ಕಳಚಿಬಿತ್ತು. ಮುಖವೆತ್ತಿ ನೋಡಿದ ಮಾರಯ್ಯ ಅವನ ಭುಜವನ್ನು ತಟ್ಟಿ ಕೈಯನ್ನು ಕೆಳಗಿಳಿಸಿದರು. ನಾಯಕನು ಕುದು ರೆಯಿಂದಿಳಿದು ವಂದಿಸಿದನು.

ಬಸವಣ್ಣನವರು ಮೇಣೆಯಿಂದಿಳಿದು ಬಂದು ಮಾರಯ್ಯನವರಿಗೆ ವಂದಿ ಸಿದರು. ಗಂಗಾಂಬೆ ಬಂದು ಮಹಾದೇವಿಯಮ್ಮನವರಿಗೆ ವಂದಿಸಿದಳು. ಅಷ್ಟರಲ್ಲಿ ನಗರದಿಂದ ಬಂದ ಜನರಿಂದ ಆ ಬಯಲೆಲ್ಲ ತುಂಬಿತು. ಮಾರಯ್ಯ ಕೈಮುಗಿದು ಕೂಗಿ ಹೇಳಿದರು:

"ಸರ್ವರೂ ಶಾಂತವಾಗಿ ಸರಿಯಾಗಿ ಕುಳಿತುಕೊಳ್ಳಬೇಕು. ನೀವೆಲ್ಲರು ಇಲ್ಲಿ ಬಂದು ಅಣ್ಣನವರನ್ನು ಬೀಳ್ಕೊಡಬೇಕೆಂದು ಯಾರು ತಿಳಿದಿದ್ದರು? ನಿಃಕ ಳಂಕ ಮಲ್ಲನ ಇಚ್ಛೆ! ಅಣ್ಣನವರ ಆದೇಶ ಕೇಳುವ ಮೊದಲು ನಾನೊಂದು ಮಾತು ಹೇಳುವದು ಅವಶ್ಯವಾಗಿದೆ. ಶರಣಧರ್ಮದ ಮೇಲಿನ ಶ್ರದ್ಧೆ ಯಿಂದ ನಾನು ಅರಸುತನ ಬಿಟ್ಟು ಇಲ್ಲಿಗೆ ಬಂದೆನು. 'ನಾನೇಕೆ ಬಂದೆ? ಸುಖವ ಬಿಟ್ಟು ಬಂದುದಕ್ಕೆ ಒಂದೂ ಆದುದಿಲ್ಲ. ಸಂಸಾರದಲ್ಲಿ ಸುಖಿಯಲ್ಲ. ಪರಮಾರ್ಥದಲ್ಲಿ ಪರಿಣಾಮಿಯಲ್ಲ' ಎಂದು ಮಹಮನೆಯ ಸೇವಾಕಾರ್ಯ ವನ್ನು ಪರಿಶೀಲಿಸಿ ಟೀಕಿಸಿದ್ದೆನು. ಆದರೆ ಅಣ್ಣನವರ ದರ್ಶನ ಪಡೆದಂತೆ ನನ್ನ ಭಾವನೆ ಬದಲಾಗುತ್ತ ಬಂದಿತು. ಶರಣ ಧರ್ಮದ ಮೇಲಿನ ಶ್ರದ್ಧೆ ಹೆಚ್ಚಾಗುತ್ತ ಬಂದಿತು. ನನ್ನ ಮನವೀಗ ದೃಢವಾಗಿ ಹೇಳುತ್ತಿದೆ :

"ಎನ್ನರಿವು ಮರೆವು ಬಸವಂಗರ್ಪಿತ
ಎನ್ನ ಆಚಾರ ವಿಚಾರ ಬಸವಂಗರ್ಪಿತ
ಎನ್ನ ಭಾವ ನಿರ್ಭಾವ ಬಸವಂಗರ್ಪಿತ
ಎನ್ನ ಅಂತರಂಗ ಬಹಿರಂಗ ಬಸವಂಗರ್ಪಿತ
ನೀನು ನಾನೆಂಬುದು ಬಸವಂಗರ್ಪಿತ

ಇಂತು ಬಸವಣ್ಣಂಗೆ ಎನ್ನ ನಿವೇದಿಸಿದೆನಾಗಿ, ಉಭಯವೆಂಬುದು ಇಲ್ಲವಾ
ನಿರಾಲಂಬದಲ್ಲಿ ನಿಜನಿವಾಸಿಯಾಗಿರ್ಪೆನಯ್ಯಾ ನಿಃಕಳಂಕ ಮಲ್ಲಿಕಾರ್ಜುನಾ

ಬಳಿಕ ಮಾರಯ್ಯನವರ ಅಭಿಲಾಷೆಯಂತೆ ಬಸವರಾಜರು ಕೈಮ
ಗಿದು ನುಡಿದರು :

“ಕಲ್ಯಾಣವೆನಗೆ ಕಾರಣರೂಪ! ಕಲ್ಯಾಣದಲ್ಲಿ ಜೀವನ. ಲೋ
ಸೇವೆ, ಅನುಭಾವ! ಅರಿವಿನ ಕಣ್ತೆರೆದುದು ಇಲ್ಲಿ. ಕಲ್ಯಾಣವನ್ನು ತೊರೆದ
ನಿಮ್ಮೆಲ್ಲರಿಂದ ಬೀಳ್ಕೊಳ್ಳಲಾಗುವ ದುಃಖವನ್ನು ಸಹಿಸುವ ಸಾಮರ್ಥ್ಯವನ
ಕರುಣಿಸೆಂದು ಸಂಗಮನಾಥನಲ್ಲಿ ಪ್ರಾರ್ಥನೆ! ಶರಣ ಧರ್ಮ ಶೈವಮತ
ಶಿರೋಮಣಿ! ಶರಣರು ಅತಿವರ್ಣಾಶ್ರಮಿಗಳು. ನೀವು ನಿಜವಾಗಿ ಶರಣ
ದರೆ ಜಾತಿ ಪಂಥಗಳ ನಿರ್ಮೂಲನಕ್ಕೆ ಬದ್ಧಕಂಕಣರಾಗಿರಿ. ಶಾಂತ ವಿ
ತ್ವದಿಂದ ಅದನ್ನು ಸಾಧಿಸಿರಿ. ಶರಣು ಶರಣು” ಸುತ್ತಲೂ ಕೈಮುಗಿದ
ಮಾರಯ್ಯನವರಿಗೆ ವಂದಿಸಿ ಮೇಣೆ ಹತ್ತಿದರು.

ಪ್ರಯಾಣಿಕರು ಮರೆಯಾಗುವವರೆಗೆ ನೀರವಸಾಗರದಂತೆ ನಿಂತ
ನೋಡಿ ಜನರು ಭಾರವಾದ ಕಾಲುಕಿತ್ತಿಕೊಂಡು ನಗರದೊಳಗೆ ನಡೆದರ

ಮಾರಯ್ಯನವರು ಮಹಾಲಿಂಗ ಮೊದಲಾದ ಬಾಂಧವರೊಡನೆ ಕೆಲ
ಹೊತ್ತು ಮಾತಾಡಿದ ಬಳಿಕ ಕೊಡಲಿಯನ್ನು ತಕ್ಕೊಂಡು ಕಾಯಕ
ನಡೆದರು. ಮಹಾದೇವಿಯಮ್ಮ ಕುಟೀರದಲ್ಲಿ ತಮ್ಮಷ್ಟಕ್ಕೆ ತಾವೇ ಹಾ
ಕೊಳ್ಳುತ್ತಿದ್ದರು :

ಸವಾಲಕ್ಷದಲ್ಲಿ ಹುಟ್ಟಿ, ಸಕಲಕ್ರಮಂಗಳಲಿದ್ದು ಭೋಗಿಸಿ
    ಪುಣ್ಯ-ಪಾಪಂಗಳೇನೆಂಬುದನರಿಯದೆ
    ಶ್ರುತಿ, ಸ್ಮೃತಿ ತತ್ವಂಗಳ ತಿಳಿಯದೆ
    ಅಗಮ್ಯ ಅಗೋಚರ ಲಿಂಗವನರಿಯದೆ
    ವೃಥಾ ವೈಭವಕ್ಕೆ ಕೆಡುತ್ತಿದ್ದೆಯಲ್ಲಾ !
ಅಂದು ಬಂದ ಕಥನ, ಬಸವೇಶ್ವರನಿಂದ ಬಂದ ಮಥನ
    ಶುಷ್ಕ ಕಾಯಕದ ಯತನ, ಎನ್ನ ಸತೀ ಭಾವದ ಜತನ
    ಭಕ್ತಿವರ್ತನದ ಸೌಖ್ಯಸಂಬಂಧ, ನಿಷ್ಠೆ, ದೃಷ್ಟಿ, ಭಕ್ತಿಜ್ಞಾನವೈರಾಗ
    ಇಂತಿನ ಹೊತ್ತಾದೆಯಲ್ಲಾ !

ಇಂತೀ ಘಟ ಬಸವಣ್ಣನ ತಪ್ಪಲಲ್ಲಿ ನಿಶ್ಚಯವಾಗಿ ನಿಂದಲ್ಲದೆ
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ
ಕಾಣಬಾರದು.

× × × × ×

ಹರಳಯ್ಯ-ಮಧುವಯ್ಯ - ಶೀಲವಂತಯ್ಯಗಳನ್ನು ಬಂಧಿಸಿಕೊಂಡು ಒಯ್ದರು. ಬಿಜ್ಜಳನು ತಾನೇ ನ್ಯಾಯಪೀಠದ ಮುಖ್ಯನಾಗಿ ಆ ಮೂವರಿಗೆ ಮರಣದಂಡನೆ ವಿಧಿಸಿದನು. ಶರಣರು ಸಂತಾಪಗೊಂಡರು. ಚೆನ್ನಬಸವಣ್ಣ ಪ್ರತಿಭಟಿಸಿ ಮಂತ್ರಿಪದ ತ್ಯಜಿಸಿಬಂದನು. ತಂದೆ, ಮಾವ, ಪತಿ ಮೂವರ ಮರಣದಂಡನೆಯ ಸಹಿಸಲಾರದ ಸುದ್ದಿಯಿಂದ ಕಲಾವತಿ ಎದೆಯೊಡೆದು ಹಾಸಿಗೆ ಹಿಡಿದುಬಿಟ್ಟಳು. ಇನ್ನು ತಮಗೆ ತೊಂದರೆಯಾಗುವದೆಂದು ಶರಣ ಸಂದೋಹ ಕಲ್ಯಾಣವನ್ನು ಬಿಟ್ಟುಹೋಗುವ ನಿಶ್ಚಯ ಮಾಡಿತು. ಮೊದಲು ಗ್ರಂಥರಾಶಿಯನ್ನು ಶೂನ್ಯಪೀಠವನ್ನು ಮಲೆನಾಡಿನ ಸುರಕ್ಷಿತ ಸ್ಥಳಕ್ಕೆ ಕಳಿಸುವ ವ್ಯವಸ್ಥೆ ಮಾಡಬೇಕಾಗಿತ್ತು. ಅದು ಮಾರಯ್ಯನವರಿಗೇ ಸಾಧ್ಯವಾಯಿತು. ಒಂದು ರಾತ್ರಿ ಬಾಂಧವರ ಹಳ್ಳಿಗಳಿಂದ ಮಹಮನೆಗೆ ಎಂಟು ಬಂಡಿಗಳು ಬಂದು ಅವುಗಳನ್ನು ಹೇರಿಕೊಂಡು ಹೋದವು.

ಮಾರಯ್ಯನವರು ಭಕ್ತಿಯೊಡನೆ ಬೆಳೆಸಿದ ಸದ್ಭಾವದ ಸಹೋದರತ್ವ ಸಹಕಾರಗಳಿಂದ ಓಣಿಯ ಮತ್ತು ಸಮೀಪದ ಹಳ್ಳಿಗಳಲ್ಲಿಯ ಜನರು ಪರಸ್ಪರ ಬಾಂಧವರಾಗಿ ನಡೆಯುತ್ತಿದ್ದರು. ತಮ್ಮದು ಬಾಂಧವರ ಪ್ರದೇಶವೆಂದು ಹೇಳಿಕೊಳ್ಳುತ್ತಿದ್ದರು. ನಗರದ ಉಳಿದ ಭಾಗದವರಿಗೆ ಈ ಪ್ರದೇಶವು ಮೋಳಿಗೆಯ್ಯಕೇರಿಯಾಗಿತ್ತು. ಮೋಳಿಗೆಯ್ಯಕೇರಿಯ ಸಂಘಟನೆಯೆಂದರೆ ರಾಜಭಟರೂ ಅಳುಕಿ ನಡೆಯುತ್ತಿದ್ದರು.

ಹರಳಯ್ಯ ಮಧುವಯ್ಯ ಶೀಲವಂತಯ್ಯಗಳ ಮರಣದಂಡನೆ ಕಾರ್ಯಗತವಾಯಿತು. ಮೂರು ಶವಗಳನ್ನು ತಾವೇ ಸಂಸ್ಕರಿಸಲು ಶರಣರು ಆಡಳಿತದಿಂದ ಒಪ್ಪಿಗೆ ಪಡೆದಿದ್ದರು. ಅವರೆಲ್ಲರು ರುದ್ರ ಭೂಮಿಯಲ್ಲಿ ನೆರೆದಿರುವ ಹೊತ್ತಿಗೆ ಕಲಾವತಿಯ ಪ್ರಾಣ ಪಕ್ಷಿಯೂ ಹಾರಿ ಹೋಗಿದ್ದಿತು. ಆ ಕಳೇವರವನ್ನೂ ಅಲ್ಲಿಗೇ ತಂದರು. ಲಿಂಗೈಕ್ಯಕ್ರಮದ ಸಂಕೇತದಂತೆ ಸಮಾಧಿಗಳನ್ನು ರಚಿಸಿ ಮಂತ್ರ ಘೋಷದ ಮಧ್ಯದಲ್ಲಿ ದೇಹಗಳನ್ನಿಟ್ಟರು.

ಶೀಲವಂತ ಕಲಾವತಿಯರ ದೇಹಗಳನ್ನು ಜತೆಯಾಗಿ ಸಮಾಧಿಗೊಳಿಸಿದರು. ಈ ಸಂದರ್ಭದಲ್ಲಿ ಚೆನ್ನಬಸವಣ್ಣ, ಸಕಲೇಶ ಮಾದರಸು, ಮಾಚಯ್ಯ ಮುಂತಾದವರು ಶರಣರ ಸತ್ಯದ ನಡೆನುಡಿಗಳನ್ನು ಸಮರ್ಥಿಸಿ ಉದ್ವೇಗದಿಂದ ಮಾತನಾಡಿದರು. ಅದೇ ಆವೇಗದಲ್ಲಿ ಮಾರಯ್ಯನವರೂ ಹೇಳಿದರು :

"ಅಗ್ರಜ ಅಂತ್ಯಜ ವರ್ಣಧರ್ಮದ ಎರಡು ಧ್ರುವಗಳು.
ಒಂದು ಉತ್ತರ ಇನ್ನೊಂದು ದಕ್ಷಿಣ; ನಡುವೆ ದೊಡ್ಡ ಕಮರಿ.
ಸಮತೆಯ ಗಾಳಿ ಬೀಸಿ, ಶಿವಭಕ್ತಿಯ ಸೂತ್ರ ಬಂಧಿಸಿತ್ತು ಇವೆರಡನ್ನು!
ಅಗ್ರಜನ ಪುತ್ರಿ ಅಂತ್ಯಜನ ಪುತ್ರನ ಕೈ ಹಿಡಿದಳು.
ಸಾಧಿಸಿತ್ತು ಮಾನವತೆಯ ಮಹಾಸಿದ್ಧಿ ಶರಣರಲ್ಲಿ!
ನಿಃಕಳಂಕ ಮಲ್ಲಿಕಾರ್ಜುನಾ ನೋಡಿ ಬೆರಗಾದೆ ನಾನು." (ಜಿ. ಪ್ರ.)

ಶರಣರು ಕಲ್ಯಾಣ ಬಿಟ್ಟು ಹೋಗುವದನ್ನು ನಗರದಲ್ಲಿಯ ೧೦೮ ಮಠಗಳವರಿಗೆ ಅನುಭಾವಿಗಳಿಗೆ ತಿಳಿಸಿ, ಹತ್ತಿರ ಬಂದಿದ್ದ ಆಪತ್ತಿನ ಬಗೆಗೆ ಎಚ್ಚರಿಕೆ ನೀಡಲಾಗಿದ್ದಿತು. ಶರಣರ ಪ್ರಯಾಣಕ್ಕಾಗಿ ಬಾಂಧವರ ಹಳ್ಳಿಗಳ ಇಪ್ಪತ್ತು ಬಂಡಿಗಳು ಮತ್ತೆ ಬಂದವು. ರಾತ್ರಿಯ ಕಡೆಯ ಪ್ರಹರದಲ್ಲಿ ಕೋಟೆಯಿಂದ ಹೊರ ಹೊರಡುವದಕ್ಕಾಗಿ ಮಾಚಯ್ಯನು ಆ ಕಡೆಯ ದ್ವಾರಪಾಲಕರೊಡನೆ ಸಂಧಾನ ಮಾಡಿಕೊಂಡಿದ್ದನು.

ಆ ದಿನ ಅತ್ತ ಸಾಯಂಕಾಲ ಬಿಜ್ಜಳನು ಕರೆದ ಮಂತ್ರಿಗಳ ದಳಪತಿಗಳ ರಹಸ್ಯ ಸಭೆಯಲ್ಲಿ 'ಪ್ರಮುಖ ಶರಣರನ್ನು ಬಂಧಿಸಿ, ಮಹಮನೆ ಅನುಭವ ಮಂಟಪಗಳನ್ನು ನಾಶಮಾಡುವ' ನಿರ್ಣಯ ಮಾಡಲಾಯಿತು ಅನಂತರದ ಸ್ವಲ್ಪ ಸಮಯದಲ್ಲಿ, ಸೆರೆಮನೆಯಲ್ಲಿದ್ದ ಚಾಲುಕ್ಯ ಜಗದೇಕಮಲ್ಲ ಹಾಗು ಬೊಮ್ಮರಸರು ಕಾವಲುಗಾರರನ್ನು ವಂಚಿಸಿ ಪಾರಾಗಿ ಬಂದು ವೇಷ ಮರೆಸಿ ಬಿಜ್ಜಳನ ಊಳಿಗದವರಲ್ಲಿ ಸೇರಿ ಬಿಜ್ಜಳನ ಕೊಲೆ ಮಾಡಿದರು. ಅವರು 'ಹರಳಯ್ಯ-ಮಧುವಯ್ಯಗಳ ಕೊಲೆಯ ಸೇಡು' ಎಂದು ಕೂಗುತ್ತಾ ಹೋದರು. ಹೋಗುವಾಗ ಅವರನ್ನು ತಡೆದ ಭಟರಿಂದ ಜಗದೇಕಮಲ್ಲನು ಹತನಾದನು. ಬೊಮ್ಮರಸನು ಪಾರಾದನು. ನಗರದ ವಾತಾವರಣವು ಕುದಿಯುವ ಕಡಾಹದಂತಾಯಿತು. ಅದರಲ್ಲಿ ಶರಣರ ಪ್ರಾಣಗಳು ಬೆಂದು ಹೋಗುವವೆಂಬದು ಸ್ಪಷ್ಟ ಕಾಣಹತ್ತಿತು. ಆದರೆ ಅಷ್ಟರಲ್ಲಿ ಮಹಮನೆಯ ಶರಣರ ಸಿದ್ಧತೆ ಪೂರ್ಣವಾಗಿತ್ತಾದ್ದರಿಂದ ಅವರು

ಯೋಚಿಸಿದಂತೆ ನಗರದಿಂದ ಹೊರಬಿದ್ದು ಬಂದರು. ಪರಿಸ್ಥಿತಿಯ ಅರಿವಾಗಿದ್ದ ಮಾರಯ್ಯನವರೂ ಬಾಂಧವ ತರುಣರೂ ಸುಮ್ಮನೆ ಕೂಡ್ರಲಿಲ್ಲ. ರಾತ್ರಿಯೆಲ್ಲ ನಗರದಲ್ಲಿ ಸಂಚರಿಸಿ ಸಾಧ್ಯವಾದಷ್ಟು ಲಿಂಗವಂತರನ್ನು ನಗರದಿಂದ ಹೊರಗೆ ಕಳಿಸಿದರು.

ರಾಜ್ಯಾಧಿಕಾರಕ್ಕಾಗಿ ಸ್ಪರ್ಧಿಸಿ ಹೋರಿದ ಇಬ್ಬರು ರಾಜರ ಶವ ಸಂಸ್ಕಾರ ಮತ್ತು ತಾತ್ಕಾಲಿಕ ಆಡಳಿತದ ಅಧಿಕಾರಕ್ಕಾಗಿ ಘರ್ಷಣೆ ಇವೇ ಮರುದಿನ ಹಗಲಿನಲ್ಲೆಲ್ಲ ನಡೆದದ್ದರಿಂದ ಶಿವಭಕ್ತರನ್ನು ನಗರದಿಂದ ಹೊರ ಹೊರಡಿಸಲು ಮಾರಯ್ಯ ಮಂಡಳಿಗೆ ಮತ್ತಿಷ್ಟು ಅವಕಾಶ ಸಿಕ್ಕಿತು. ಅವರ ಸಲಹೆಗಳನ್ನು ಲಕ್ಷಿಸದೆ ಉಳಿದ ಭಕ್ತರು, ಜಂಗಮರು, ಮಠಾಧೀಶರು ಮಾರಿಗೆ ಬಲಿಯಾದರು. ಅಂದು ರಾತ್ರಿ ಕೋಟೆಯ ದ್ವಾರಗಳನ್ನು ಮುಚ್ಚಿದರು. ಮೊದಲೇ ದ್ವೇಷದಿಂದ ಕುದಿಯುತ್ತಿದ್ದ ಸೇನಾನಿಗಳು, ಬಿಜ್ಜಳನ ಕೊಲೆಗಡಕರ ಕೂಗಿನ ನೆವಮಾಡಿ ಬಿಜ್ಜಳನ ಕೊಲೆಯ ಅಪರಾಧಕ್ಕೆ ಶರಣರನ್ನು ಸಂಬಂಧಪಡಿಸಿ ಮಹಮನೆ–ಅನುಭವಮಂಟಪಗಳನ್ನು ಧ್ವಂಸ ಮಾಡಿದರು. ಶರಣ ಧರ್ಮಾನುಯಾಯಿಗಳನ್ನು ಕರುಣೆಯಿಲ್ಲದೆ ಕೊಂದು ಬಿಟ್ಟರು. ಆಗ ನಗರದ ಹೊರಗಿರುವ ಮಾರಯ್ಯನವರಿಗೂ ಅವರ ಮಂದಿಗೂ ಮರಗುವದಲ್ಲದೆ ಮತ್ತೇನನ್ನೂ ಮಾಡಲು ಸಾಧ್ಯವಿರಲಿಲ್ಲ. ಕಲ್ಯಾಣದ ಶಿವಪುರ ಹಾಳಾಯಿತು. ಆದರೆ ಅಲ್ಲಿ ಹೊತ್ತಿದ ಜ್ಯೋತಿ ಆರಲಿಲ್ಲ. ಅದು ಒಂದಕ್ಕೆ ಹತ್ತಾಗಿ ನೂರಾಗಿ ನಾಡಿನಲ್ಲಿ ಹೊತ್ತಿ ಬೆಳಗಿತು.

ಇಲ್ಲಿಗೆ ಮಾರಯ್ಯನವರ ಮಹಾದೇವಿಯಮ್ಮನವರ ಜೀವನದ ಎರಡನೆಯ ಘಟ್ಟವು ಮುಗಿಯಿತು. ಬುದ್ಧಿಜ್ಞಾನಜೀವಿಗಳಾದ ಅವರು ಭಾವ ಜೀವಿಗಳಾಗಿ ಬಿಟ್ಟರು. ಮುಂದಿನ ಜೀವನ ನಿತ್ಯ ಬೇಗಿಗೆ ಪಯಣ!

## ೧೪. ಬೆಳಗು ಬೆಳಗ ಬೆಳಗಿತು.

ಮಾತುಗಳ ನಡುವೆ ಮೂವರನ್ನೂ ಆವರಿಸಿದ ಮೌನವನ್ನು ಮಹಾ
ಲಿಂಗನೇ ಮುರಿದು ಮಾತನಾಡಿದನು :

"ಏನು ಅನಾಹುತ ನಡೆಯಿತು, ಎಷ್ಟು ಜೀವ ನಾಶವಾದವು, ಇದೆಲ್ಲ
ಪರಶಿವನ ಲೀಲೆಯೇ ಗುರುವೆ? ಕರುಣಾಕರನಾದ ಅವನು ಇರುತ್ತಿದ್ದರೆ
ಈ ದುಶ್ಶಕ್ತಿಗಳ ಆಟವೇಕೆ ನಡೆಯಬೇಕಾಗಿತ್ತು ? "

‹‹ಮಾರಯ್ಯ ಮುಖವೆತ್ತಿ ನುಡಿದರು : ‹‹ಮಹಾಲಿಂಗಾ, ಬಲ್ಲವ
ನೀನು ! ನೊಂದಮನಸ್ಸಿನಿಂದ ತಿಳಿಯದವನಂತಾಗಿರುವೆ. ಶಿವನಿಲ್ಲದಿದ್ದ
ಯಾವದಿದೆ ? ಉದಕವಿಲ್ಲದಿರೆ ಅಂಬುಧಿ-ತಟಾಕಗಳೆಂಬ ನಾಮವುಂಟೇ
ಅಂಬುಧಿಯ ತೆರೆತೆರೆಗಳ ತಾಕಲಾಟ-ಎರಚಾಟಗಳೂ ಅತಿಭಯಂಕ
ತುಫಾನಗಳೂ ಆ ಮಹೋದಧಿಯಲ್ಲಿಯೇ ತೋರಿದವುಗಳಲ್ಲವೇ? ಅದೆಲ್ಲ
ಅವನ ಲೀಲೆ; ಅವನ ಕರುಣೆ ! "

‹‹ಈ ದುರ್ಘಟನೆಗಳೂ ಶಿವನ ಕರುಣೆ ? ››

‹‹ಹೌದು ಮತ್ತೆ ! ››

‹‹ಹಾಗೆ ತಿಳಿಯುವದಕ್ಕೂ ಶಿವನ ಕರುಣೆ ಬೇಕು. "
ಮಹಾದೇವಿಯಮ್ಮನವರ ಮಾತಿದು.

‹‹ಅದು ಸರಿ ಈಗ ಕೇಳು ಮಹಾಲಿಂಗಾ "ಬಣ್ಣವಿಲ್ಲದಿರೆ ಬಂಗಾ
ವೆಂಬ ವಿಶೇಷವುಂಟೇ ? ಗಂಧವಿಲ್ಲದಿದ್ದರೆ ಚಂದನವೆಂಬ ಅಂಗವೆಲ್ಲಿದೆ
ಶಿಲೆಯೊಡನೆ ಅದರ ಸಂಘರ್ಷಣವಿಲ್ಲದಿದ್ದರೆ ಆ ಗಂಧದ ಆನಂದವೆಲ್ಲಿದೆ
ನೀನಿಲ್ಲದೆ ನಾನೆಂಬ ಭಾವವುಂಟೇ ? ಜಗವೆಲ್ಲವು ನಿನ್ನ ಹಾಯೆ! ಉತ್ಪತ್ತಿ
ಸ್ಥಿತಿ-ಲಯವೆಲ್ಲವು ನಿನ್ನ ಹಾಯೆ! ನಿಃಕಳಂಕ ಮಲ್ಲಿಕಾರ್ಜುನ ಮಹಾ
ಲಿಂಗವೇ! ›› ಎಂದು ತಿಳಿಯಬೇಕಲ್ಲವೇ ಅಣ್ಣಾ ? ಹೀಗೆ ಹಾಗೆ ಎಂಬ

ದನ್ನೂ ಅಂಶು ಇಂದು ಎಂಬುದನ್ನೂ ಬಿಟ್ಟುಕೊಟ್ಟು ನೋಡು. ಆ ಪರಾತ್ಪರ ವಸ್ತುವೇ ನೀನಿರುವೆ. ಅದವೆ ಎಲ್ಲವಾದುದು ಎಲ್ಲಾನಡೆದುದು, ''

'' ಹಾಗಾದರೆ ಈ ಅನುಭವಮಂಟಪಾದಿ ಸಂಘಟನೆಗಳ ಅರ್ಥವೇನು? ಅದರ ನಡೆವಳಿಕೆ ಒಂದು ಬೆಳಕ ನೀಡುತ್ತಿತ್ತಲ್ಲ! ''

' ಹೌದು ಆ ಬೆಳಕೇ ಆ ಸಂಘಟನೆಯ ಅರ್ಥ! ಏಕತ್ವದ ಸ್ವರೂಪು ಆ ಬೆಳಕು. ಅವೆಲ್ಲ ಅರಿವ ಮಾರ್ಗದಲ್ಲಿಯ ಕ್ರಮಣ-ವಿರಾಮಗಳು. ಅರಿವಲ್ಲಿ ಉಭಯ., ಅರಿದಲ್ಲಿ ಏಕ! ಏಕಕ್ಕಿಲ್ಲ ಬಹುಶಾಖೆಯ ಸ್ಥಲ! ಅರಿವ ಕಾಲದ ಉಭಯವಿರುವಾಗ ಸಾಧನೆಯ ಸತ್ಕ್ರಿಯೆಗಳು ನಡೆಯಬೇಕು. ಅವುಗಳಿಗೆ ಆತಂಕವಾಗುವ ದುಶ್ಶಕ್ತಿಗಳನ್ನು ನಿಗ್ರಹಿಸುವದಕ್ಕಾಗಿ ಹೋರಾಡಬೇಕು. ನಿಗ್ರಹಿಸುವದು ಅಸಾಧ್ಯವಾದರೆ ಅಲ್ಲಿಂದ ದೂರ ಸರಿಯಬೇಕು. "

'' ಸರಿಯದಿದ್ದರೆ ನಾಶವಾಗಬೇಕು. ಇದನ್ನು ಕಣ್ಣಾರೆ ಕಂಡೆವು ''

'' ಹೀಗೆ ಸಾಧನೆಯ ಅವಸ್ಥೆಯಲ್ಲಿ ದೇಹಾವಸಾನ ಒದಗಿದರೆ ಪುನರ್ಜನ್ಮ ಸಿದ್ಧವಷ್ಟೇ ? "

" ಹೌದು ಗುರುವೇ ಗೊತ್ತಾಯಿತು. "

'' ಮೊದಲು ಗೊತ್ತಿದ್ದವನೇ ನೀನು! ಕರಗದಿರುವ ಮರೆವು ಸರಿಸರಿದು ಮತ್ತೆ ಪದರುಪದರಾಗಿ ಬಂದು ಆವರಿಸುವುದು. ಕಾಶ್ಮೀರದಿಂದ ಈ ಕ್ರಾಂತಿಯ ವರೆಗಿನ ಅನೇಕ ಘಟನೆಗಳ ನೆನಹು ನನಗೂ ಸುಳಿದು ಒಮ್ಮೊಮ್ಮೆ ಅರುಹುಗೆಡಿಸುತ್ತಿರುವವು. ನಿಃಕಳಂಕ ಮಲ್ಲಿಕಾರ್ಜುನ ಮಹಾಲಿಂಗ ಅದೇಕೆ ಕ್ಷಣಕಾಲ ಮರೆಯಾಗುವನೋ ? ಈ ಖಂಡಿತ ಅಖಂಡಿತವಾಗಬೇಕು ಮಹಾಲಿಂಗಾ. "

'' ಹೌದು ಅಯ್ಯನವರೇ! ಆ ಹದನ ನೀವೇ ಬಲ್ಲಿರಿ. ನೀವೇ ಗುರು. "

ಅಮ್ಮನವರು ಆ ವಿಚಾರವನ್ನು ಅನುಮೋದಿಸಿ ಹೀಗೆ ನುಡಿದರು:

'' ಬೀಜದೊಳಗಣ ವೃಕ್ಷದ ಹಣ್ಣನಾರು ಮೆಲಬಲ್ಲರು ?
ಸಸಿಯೊಳಗಣ ಲತೆ ಪರ್ಣ ತಲೆದೋರದೆ
ನರುಗಂಪಿನ ಕುಸುಮವ ಅದಾರು ಮುಡಿವರು ?
ಇಂತೀ ಅರಿವಿನ ಅರಿವ ಕುರುಹಿಟ್ಟು ಕೂಡುವವನೇ ಲಿಂಗಾಂಗಿ.
ಎನ್ನಯ್ಯಪ್ರಿಯಇಮ್ಮಡಿನಿಃಕಳಂಕಮಲ್ಲಿಕಾರ್ಜುನನಲ್ಲಿ ಸ್ವಾನುಭಾವಿಯ
ಸನ್ನದ್ಧಸ್ಥಲ.

ಅದಕ್ಕಾಗಿ ಕೊರಗಬೇಕಾಗಿಲ್ಲ. "

ಇದನ್ನು ಕೇಳಿ ಮಾರಯ್ಯ ಎದೆದುಂಬಿ ನುಡಿದರು :

" ಭಾಪು ಮಹಾದೇವೀ ಅರಿವಿನ ಅರಿವೇ ಕುರುಹು. ಅದು ಕ
ಗತವಾಗಿ ಮುನ್ನಡೆಸುತ್ತಿರುವಾಗ, ಹರಿವ ಹೆದ್ದೊರೆ ಸಾಗರವ ಸೇರಲೇ
ಬೇಕಾದಂತೆ ಆ ಲಿಂಗಾಂಗಿ ಅರಿವಿನಲ್ಲಿ ಬೆರೆಯಲೇಬೇಕು. ಬೀಜವು ವೃಕ್ಷ
ವಾಗುವ ಪರಿಣಾಮಕ್ರಮದಲ್ಲಿದ್ದರೆ ಆ ಹಣ್ಣು ಮೆಲಲು ದೊರೆವಲ್ಲಿ ಸಂದೇಹ
ವೇನು ? ಸಂದೇಹವಳಿದಾಗ ಶಾಂತಿಯಲ್ಲದೆ ಮತ್ತೇನು? ಸರಿಯಾಗಿ ಹೇಳಿದೆ
ಮಹಾದೇವೀ

ಸತ್ವಗೆಟ್ಟಲ್ಲಿ ಕಾಷ್ಟವನೂರಿ ನಡೆಯಬೇಕು,
ಮಹತ್‌ತತ್ವವಿದ್ದಲ್ಲಿ ನಿಶ್ಚಯವ ಹೇಳಲಾಗಿ
  ಮಹಾಪ್ರಸಾದವೆಂದು ಕೈಕೊಳ್ಳಬೇಕು.
ಎನ್ನ ಭಕ್ತಿಗೆ ನೀ ಶಕ್ತಿಯಾದ ಕಾರಣ
  ಎನ್ನ ಸತ್ಯಕ್ಕೆ ನೀ ಸತಿಯಾದಕಾರಣ
  ಎನ್ನ ಸುಖದುಃಖ ನಿನ್ನ ಸುಖದುಃಖ ಅನ್ಯವಿಲ್ಲ.
ಇದಕ್ಕೆ ಭಿನ್ನ ಭೇದವೇನು ಹೇಳಾ ನಿಃಕಳಂಕ ಮಲ್ಲಿಕಾರ್ಜುನ "

ಎನ್ನುತ್ತ ಮಾರಯ್ಯ ಕೈಮುಗಿಯಲು, ಮಹಾದೇವಿ ನೆಲಕ್ಕೆ ತಲೆಯೊಡ್ಡಿ
ವಂದಿಸಿ ಎಂದಳು :

"ನೀರು ನೆಲವಿಲ್ಲದೆ ಇರಬಹುದೇ? ಬೀಜ ನೆಲವಿಲ್ಲದೆ ಹುಟ್ಟಬಹುದೆ?
ಜ್ಞಾನ, ಕ್ರಿಯೆಯಿಲ್ಲದೆ ಅರಿಯಬಹುದೇ?
ಆ ಕ್ರಿಯೆ ನಿಮ್ಮಿಂದಳವಟ್ಟಿತ್ತು ಎನ್ನಯ್ಯ ಪ್ರೀಯ ಇಮ್ಮಡಿ ನಿ. ಮ.

ಆಗ ಮಹಾಲಿಂಗನು—'ಅಮ್ಮನವರೇ ನೀವಿಬ್ಬರೂ ಶಿವಶಕ್ತಿಯರು. ನನ್ನ
ಕಳವಳವೀಗ ಕಳಚುತ್ತಲಿದೆ. ಇನ್ನೇಕೆ ಆ ಚಿಂತೆ? ಗುರುವೇ ನೀವೇ ನನ್ನ
ಬುದ್ಧಿಗೆ ಬೆಳಕ ನೀಡುತ್ತಿರಬೇಕು.' ಎಂದು ಎದ್ದು ಸಾಷ್ಟಾಂಗವಾಗಿ
ಎರಗಿದನು.

× × × × × ×

ಕಲ್ಯಾಣನಗರದಲ್ಲಿ ಮತದ್ವೇಷದ ಗಾಳಿ ಬೀಸಿ ಉರಿಮಾಡುವಷ್ಟು
ಮಾಡಿ ತಗ್ಗಿತ್ತು. ಆದರೆ ರಾಜಕೀಯ ಆಂದೋಲನದ ಝುಂಝಾ
ವಾತವೆದ್ದಿದ್ದಿತು. ಸೋವಿದೇವ ಬರುವವರೆಗೆ ಆಡಳಿತವೆಂಬುದೇ ಇರಲಿಲ್ಲ.
ಎಲ್ಲೆಲ್ಲಿಯೂ ಅರಾಜಕತೆಯಿತ್ತು. ಆ ಕೋಲಾಹಲದ ಸೆಳಕುಗಳು ನಗರದ

ಹೊರವಲಯಕ್ಕೂ ಬರುತ್ತಿದ್ದವು. ಇದನ್ನರಿತ ಬಾಂಧವರೋಣಿಯ ಮುಖ್ಯರು ಮಾರಯ್ಯನವರ ನಿವಾಸವನ್ನು ಆಚೆಯ ಹಳ್ಳಿಗೆ ಬದಲಿಸಬೇಕೆಂದು ನಿಶ್ಚಯಿಸಿದರು. “ಚಿತ್ತೈಕಾಗ್ರತೆಗೆ ಭಂಗಬರಿಸುವ ಈ ವಾತಾವರಣಬೇಡ” ಎಂದು ಮಾರಯ್ಯನವರೂ ಒಪ್ಪಿದರು. ಆ ಹಳ್ಳಿಯ ಹತ್ತಿರದ ಒಂದು ಗವಿಯು ಏಕಾಂತಚಿಂತನೆಗೆ ಅನುಕೂಲವಾಗಿರುವದನ್ನು ಕಂಡು ಅದರ ಹತ್ತಿರವೇ ಆಶ್ರಮವನ್ನು ಕಟ್ಟಿದರು. ಅಲ್ಲಿ ಬಂದು ಬೀಡಬಿಟ್ಟರು ಮೋಳಿಗೆ ದಂಪತಿಗಳು ! ಆ ಹಳ್ಳಿಯಷ್ಟೇ ಮೋಳಿಗೆಯ್ಯಕೇರಿಯಾಯಿತು.

ಮಾರಯ್ಯ ದಂಪತಿಗಳು ಆತ್ಮಾನುಭವದ ಸುಖಸಾಗರದಲ್ಲಿ ಲೋಲಾಡುತ್ತ ಹಲವು ವರ್ಷ ಕಳೆದರು. ಅವರ ಆಧ್ಯಾತ್ಮಿಕ ಬಂಧುಗಳಾದ ಬಾಂಧವರೋಣಿಯ ಶರಣ ಮಹಾಲಿಂಗ ಮೊದಲಾದ ಹತ್ತೆಂಟು ಜನರು ಪ್ರಪಂಚದ ಬಂಧನ ಹರಿದೊಗೆದಿದ್ದರು. ಅವರು ನಿತ್ಯವೂ ಮೋಳಿಗೆಯ್ಯಕೇರಿಗೆ ಬಂದು ಅವರ ಸಹವಾಸದಲ್ಲಿರುತ್ತಿದ್ದರು. ಮಾರಯ್ಯನವರು ಕಾಲುಗಳಲ್ಲಿ ನಡೆವ ಶಕ್ತಿ ಇರುವವರೆಗೂ ಕಟ್ಟಿಗೆಯ ಕಾಯಕ ಬಿಟ್ಟಿರಲಿಲ್ಲ. ಇತ್ತೀಚೆಗೆ ಈ ಕಾಯಕದಲ್ಲಿ ಶರಣ ಮಹಾಲಿಂಗನು ಅವರ ಸಹಾಯಕ್ಕೂ ಸಂರಕ್ಷಣೆಗೂ ಎಂದು ಜತೆಯಲ್ಲಿ ಹೋಗುತ್ತಿದ್ದನು. ಅವರ ವಚನಗಳನ್ನೆಲ್ಲ ಜತೆಗಾರರೊಡನೆ ಕೂಡಿ ಬರೆದಿಡುತ್ತಿದ್ದನು. ಮಹಾದೇವಿಯಮ್ಮ ಹಳ್ಳಿಯ ಮಕ್ಕಳ ಪಾಲನೆಯಲ್ಲಿ ರೋಗರುಜಿನಗಳ ನಿವಾರಣೆಯಲ್ಲಿ ಒಟ್ಟೆಬರೆಗಳನ್ನು ಸರಿಪಡಿಸುವಲ್ಲಿ ಮುಗ್ಧ ಹೆಣ್ಣುಮಕ್ಕಳಿಗೆ ನೆರವಾಗುತ್ತಿದ್ದಳು. ಸ್ವತಃ ಸೂಜಿ ಹಿಡಿದು ಹಳೆಯಬಟ್ಟೆಗಳನ್ನು ಜೋಡಿಸಿ ಹೊಲಿದು ಕೊಡುತ್ತಿದ್ದಳು. ಹೀಗೆ ಅವರ ದಾಸೋಹಜೀವನವು ಅವ್ಯಾಹತವಾಗಿ ನಡೆದಿದ್ದಿತು. ಮಾರಯ್ಯನವರು ಕಲ್ಯಾಣಕ್ಕೆ ಬಂದಾಗ ಆವರಿಂದ ಆಶೀರ್ವಿಸಲ್ಪಟ್ಟ ಮಹಾಲಿಂಗ ತರುಣನಾಗಿದ್ದನು. ಅವನೂ ಈಗ ವೃದ್ಧಾಪ್ಯದಲ್ಲಿ ಕಾಲಿಡುತ್ತಿದ್ದಾನೆ. ಅಂದ ಮೇಲೆ ಮಾರಯ್ಯನವರು ನೂರನ್ನು ದಾಟಿರಬಹುದಾಗಿದೆ. ಮಹಾದೇವಿಯಮ್ಮನೂ ಹಣ್ಣುಹಾಗಲು ಮುದುಕೆ ಶಿವಯೋಗಿಣಿ!

ಶಿವಶರಣೆ ಮಹಾದೇವಿಯ ಶಿವಭಾವಕ್ಕೆ ಪ್ರಪಂಚದ ಲೇಪವು ಯಾವಾಗಲೂ ಆಗಿರಲಿಲ್ಲ. ಆನರೆ ಮಾರಯ್ಯನವರಿಗೆ ಅವರ ಜೀವನದ ಘಟನೆಗಳು ಅಷ್ಟು ಅಲಿಪ್ತವಾಗಿರಲು ಆಸ್ಪದ ಕೊಟ್ಟಿರಲಿಲ್ಲ. ಅರಸನಾಗಿರುವ

ಸಂದರ್ಭವಂತೂ ಹಾಗಿರಲಿ! ಶಿವಾನುಭವಿಗಳಾಗಿ ಭಕ್ತಿಜ್ಞಾನಗಳ ಜೀವನ
ದಲ್ಲಿರುವಾಗಲೂ, ಪ್ರಪಂಚದ ಡೊಂಕುಗಳೂ, ಸಜ್ಜನರ ಮೇಲಿನ ಅತ್ಯಾ
ಚಾರಗಳೂ, ತತ್ವಾಭಿಮಾನವೂ, ತತ್ವಪ್ರಚಾರಕ್ಕೆ ಒದಗುವ ಆತಂಕನಿವಾ
ರಣೆಗೆ ಅವಶ್ಯವಾದ ಜಾಗ್ರತಭಾವನೆಗಳೂ, ಕರ್ತವ್ಯಗಳೂ ಅವರ ಪಾ
ಮಾರ್ಥಿಕಚಿತ್ತವನ್ನು ಆಗಾಗ ಕೆದಕುತ್ತಿದ್ದವು. ತತ್ಕಾರಣವಾಗಿ ಅವರು
ಮನೋವಿಸ್ಕಂದಕ್ಕೊಳಗಾಗುತ್ತಿದ್ದರು. ಅನುಭಾವಿಗಳ ನಡೆನುಡಿಗಳಲ್ಲಿಯ
ಅಸಂಗತವನ್ನು ತಾಳ್ಮೆಯಿರಿ ಖಂಡಿಸುತ್ತಿದ್ದರು. ಶರಣರ ವಿಪ್ಲವ ಕಾ
ದಲ್ಲಿ ಅಭಿಮಾನದಿಂದ ಹೋರಾಡಿದರು. ಆಗ ಕ್ಷಣಕಾಲ ಲಿಂಗದೃಷ್ಟಿ
ಮುಚ್ಚುತ್ತಿತ್ತು. ಆದರೂ ಈ ಬಾಹ್ಯವಿಕಾರವು ಅಂತರಂಗದ ಆತ್ಮತೇ
ದಲ್ಲಿ ಬೇಗನೆ ಕರಗಿಹೋಗುತ್ತಿತ್ತು. ಅದು ಮಾಯಾತ್ಮಕ ವಿಷಯಗಳ ನಂಜಿ
ವಿಕಾರವಾಗಿರಲಿಲ್ಲ. ಮಹಾದೇವಿಯಮ್ಮನ ಸಮಯೋಚಿತವಾದ ಜ್ಯೋ
ರ್ಲಿಂಗದಂತಹ ಮಾತು ಅವರನ್ನು ಮಹಾಬೆಳಗಿನಲ್ಲಿ ಮುಳುಗಿಸುತ್ತಿತ್ತು.

ಇನ್ನೇನು ಈಗ ಶರೀರ ತೀರ ಬಲಗುಂದಿದೆ. ಕಾಯಕ ಕುಗ್ಗಿ
ದೆಂಬುದು–ನಡೆಯದೆಂಬುದು–ದೃಢವಾಗಿದೆ. ಅವರ ಸದ್ಬೋಧೆಯಿಂದ ಪುನೀ
ರಾದವರು ಸೇವೆ ಮಾಡಿದರೆ ಪರಾವಲಂಬನವೆಂದು ಜಗುಪ್ಸೆಗೊಳ್ಳುತ್ತಾರೆ
ಹೀಗೆ ಬೇಸರ ಒತ್ತರಿಸಿದಾಗ ಮಾರಯ್ಯ ಒಮ್ಮೆ ಮುಂದಿದ್ದ ಮಹದೇ
ಯನ್ನು ನೋಡಿ ಎನ್ನುತ್ತಾರೆ :

“ ಊರು ಕೆಟ್ಟು ಸೂರೆಯಾಡುವಲ್ಲಿ ಅರಿಗಾರೂ ಇಲ್ಲ-
ಬಸವಣ್ಣ ಸಂಗಮುಕ್ಕೆ ಚೆನ್ನಬಸವಣ್ಣ ಉಳುವಿಗೆ ಪ್ರಭು ಕದಳಿಗೆ
ಮಿಕ್ಕಾದ ಪ್ರಮಥರೆಲ್ಲರು ತಮ್ಮ ತಮ್ಮ ಲಕ್ಷ್ಯಭಾವಕ್ಕೆ ಮುಕ್ತಿಯನೈದಿದರು
ನನಗೊಂದು ಬಟ್ಟೆಯ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ. ”

ಕೂಡಲೆ ಮಹಾದೇವಿ ಜಾಗ್ರತೆಗಾಗಿ ಕೇಳುತ್ತಾಳೆ :

“ ಏನು ನುಡಿಯುವಿರಿ? ಇದೇನು ಹಿನ್ನೋಟ? ಇಮ್ಮಡಿ ನಿಃಕಳಂ
ಮಲ್ಲಿಕಾರ್ಜುನಲಿಂಗ ನೀವಾಗಿ ಲಿಂಗಕ್ಕೆ ಬಟ್ಟೆಯೊಂದುಬೇಕೇ? ‘ನಿ
ಲಿಂಗಾಂಗಿಗೆ ಇಹಪರವೆಂಬ ಉಭಯವಿಲ್ಲ’’ ವೆಂಬ ನಿಮ್ಮ ನಿಶ್ಚಯದ ನಿಲವ
ಅದಿರಬೇಕೇ? ”

ಮಾರಯ್ಯನವರಿಗೆ ಮರೆಗಾದ ಅರಿವು ಬೇಗ ಬೆಳಗಲಿಲ್ಲ.

“ ಮರ್ತ್ಯದ ಮಣಿಹವೆಲ್ಲಿಯ ಪರಿಯಂತರ ?
ಎನಗೆ ಕಟ್ಟು ಗುತ್ತಿಗೆಯೋ ?
ಈ ಕಟ್ಟುಗೆಯ ಹೊತ್ತು ಶಿವಭಕ್ತರ ಮನೆಗೆ ನೀವು ಕೊಟ್ಟ
ಕಾಯಕವು ಇನ್ನೆಷ್ಟುದಿನ ಹೇಳಾ ನಿಃಕಳಂಕ ಮಲ್ಲಿಕಾರ್ಜುನಾ ”

ಕೇಳಿ ಶಿವಯೋಗಿಣಿ ಕನಿಕರದಿಂದ ಮಧುರವಾಗಿ ಉಸುರಿದಳು :

“ ನೀವಾರು, ನಾನಾರು ? ಕಾಯಕವಾರು ? ಶಿವಭಕ್ತರಾರು ? ಎನ್ನಯ್ಯಾ ‘ಬೆಳಗಿನ ಮುಖದಿಂದ ಬೆಳಗಿನ ಕಳೆಯನರಿವಂತೆ ನಿನ್ನಿಂದ ನೀನೆ ತಿಳಿ ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನ ಭಿನ್ನ ಭಾವವಿಲ್ಲದೆ. ”

ಸರಿಯದ ಪದೆಯಲ್ಲಿಯೇ ಮಾರಯ್ಯ ಮಾರುತ್ತರ ಕೊಟ್ಟನು :

“ ಮರ್ತ್ಯವೆಂಬುದು ನಾ ಬಿಲ್ಲನ್ನಕ್ಕ ಕರ್ಕಶಜಗ! ಆದುಕಾರಣದಲ್ಲಿ ಕೈಲಾಸದ ಬಟ್ಟೆಯನರಸಬೇಕು. ಎನ್ನ ಭಕ್ತಿಗೆ ಎನ್ನ ನಿಶ್ಚಯಕ್ಕೆ ಒಂದು ಗೊತ್ತು ತೋರಾ. ನಿಃಕಳಂಕ ಮಲ್ಲಿಕಾರ್ಜುನನು ಎಲ್ಲಿಹನು ಹೇಳಾ. ”

ಜಗವನುಂಗಿ ವಿಜೃಂಭಿಸುವ ಮಾಯಾಮಹಾಕಾಳಿಕೆ ಮಾರಯ್ಯನವರಿಂದ ದೂರ ಸರಿದಿದ್ದುದು ನಿಜ. ಮತ್ತೆ ಮುಟ್ಟಲರಿಯದಿದ್ದುದೂ ನಿಜ! ಆದರೆ ನಿರಾಶೆಯಲ್ಲಿಯೆ ಕೊನೆಯ ಆಶೆಯ ತಾಳಿ, ಸಾತ್ವಿಕದ ಸೋಗಿನಿಂದ ಸೆರಗು ಬೀಸಿದ್ದಳು. ಆ ಸೆರಗುಗಾಳಿ ಸೋಂಕದಂತೆ ಮಹಾನುಭಾವೆ ಮಹಾದೇವಿ ಪರಮಾನುಭಾವದ ಸ್ಫುಟವಾದ ನುಡಿಗಳನ್ನು ನುಡಿಯಲೇ ಬೇಕಾಯಿತು!

“ಮಾಡಿದ ಭಕ್ತಿಗೆ ಕೈಲಾಸಕ್ಕೆ ಹೋದಿಹೆನೆಂಬುದು ಕೈಕೂಲಿ. ಭಾಷೆಯ ತಪ್ಪಿ ಓಸರಿಸುವದು ಭಕ್ತರಿಗೆ ವಿಹಿತವೇ? ದೃಷ್ಟದಲ್ಲಿ ಕೊಟ್ಟುದು ಲಕ್ಷಿಸಲರಿಯದೆ ಅಲಕ್ಷಕ್ಕೆ ಲಕ್ಷಿಸಿ ಕಾಯುವದಕ್ಕೆ ಲಕ್ಷ್ಯವೇನು? ಮರ್ತ್ಯ ಕೈಲಾಸವೆಂಬುದು. ತನ್ನರಿವು ನಿಶ್ಚಯವಾದಲ್ಲಿ ಅದೇ ಲಕ್ಷ್ಯ!

“ಸಕಲ ದೇಶಕೋಶವಾಸ ಭಂಡಾರ ಸಮಾಲಕ್ಷ ಮುಂತಾದ ಸಂಬಂಧ ಸ್ತ್ರೀಯರ ಬಿಟ್ಟು ಬಂದೆನೆಂಬುದು ಕೈಕೂಲಿಯೇ ನಿಮ್ಮ ಭಕ್ತಿ? ಕಾಷ್ಠವ ಸುವರ್ಣವ ಮಾಡಿಹೆನೆಂಬ ಘಾತುಕತನವೇ ನಿಮ್ಮ ಭಕ್ತಿ? ಕೂಟಕ್ಕೆ ಕುರುಹಾಯಿತ್ತು, ಆತ್ಮಕ್ಕೆ ಅರಿವಾಯಿತ್ತು. ಇದನರಿಯದೆ ಕೈಲಾಸವೆಂಬ ಸೂತ್ರ ಒಳಗಿಗೆ ಮನಸೋತಿರಲ್ಲಾ!

“ಕೈಯಲ್ಲಿ ಜ್ಯೋತಿಯ ಹಿಡಿದು ಕತ್ತಲೆ ಎನಲೇತಕ್ಕೆ? ಪರುಷ ಕೈಯಲ್ಲಿದ್ದು ಕೂಲಿಯ ಮಾಡಲೇತಕ್ಕೆ? ನಿತ್ಯಾನಿತ್ಯ ತಿಳಿದ ಭಕ್ತರಿಗೆ ಮರ್ತ್ಯ-ಕೈಲಾಸವೆಂಬುದು ಮುಕ್ತಿಯಲ್ಲ! ಅಲ್ಲಿ ಇಲ್ಲಿ ಎಂಬ ಗೆಲ್ಲಗುಳಿತನ ಬೇಡ! ನಿಃಕಳಂಕ ಮಲ್ಲಿಕಾರ್ಜುನ ಅಲ್ಲಿ ಇಲ್ಲಿ ಎಲ್ಲಿಯೂ ತಾನೆ! ಆತ್ಮ ನಿಶ್ಚಯವಾದಲ್ಲಿಯೇ ಕೈವಲ್ಯ! ತತ್ವವನರಿದಲ್ಲಿಯೇ ಬೇಗು! ಇದು ಸದಮಲ ಭಕ್ತನಿಗೆ ಮುಕ್ತಿ!”

ಮಾರಯ್ಯನವರ ಮುಖದ ಕಳೆ ಬೆಳಗಗೂಡಿತ್ತು. ಶಿವಯೋಗಿಣಿ ಮುಂದುವರಿದಳು!

“ಸಕಲದಲ್ಲಿ ಅಳಿದು ನಿಃಕಲದಲ್ಲಿ ಉಳಿದು ಮತ್ತೆ
ಸಕಲವ ಕೂಡಿಹೆನೆಂಬ ನಿಃಕಲವುಂಟೇ ಅಯ್ಯಾ?
ನಿಃಕಲದಲ್ಲಿ ಸಕಲವಡಗಿ, ಆ ಗುಣ ಉಪದೃಷ್ಟಕ್ಕೆ
ಈಡಿಲ್ಲದಲ್ಲಿ ಅಖಿಳ ಜಗವೆಂಬುದು ಹೊರಗು!
ಆ ಗುಣ ನಿನ್ನ ಸದ್ಭಾವ ನಿಜವಾದಲ್ಲಿ ನಿನ್ನಂಗವೇ ಕೈಲಾಸ;
ಆ ಲಿಂಗದ ಕೂಟವೇ ನಿರ್ಯಾಣ.
ಇದು ನಿಸ್ಸಂಗದ ಸಂಗ! ನಿಮ್ಮ ನೀವೇ ತಿಳಿದುಕೊಳ್ಳಿ.
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ”

ಇನ್ನುಳಿವುದೇ ಬರಬಾರದಾಗಿ ಬಂದ ತೆಳುವಾದ ತೆರೆ? ಶರಣೆಯ ನಿಜೈಕ್ಯನಿಲುವಿನ ತಿಳಿವಾತಿನಿಂದ ತೊಳೆದು ಹೇಳಹೆಸರಿಲ್ಲದೆ ಹೋಯಿತು. ಮಾರಯ್ಯನವರ ಆತ್ಮದ ಝೇಂಕಾರ ವಾಯುಮಂಡಲದಲ್ಲಿ ನಿನದಿಸಿತು.

“ಕಾಯ ಸಮಾಧಿಯನೊಲ್ಲೆ; ನೆನಹು ಸಮಾಧಿಯನೊಲ್ಲೆ.
ಕೈಲಾಸವೆಂಬ ಭವಸಾಗರವನೊಲ್ಲೆ.
ಎನ್ನ ಅಲ್ಲಿಗೆ ಇಲ್ಲಿಗೆ ಎಂದೆಳೆಯದೆ
ನಿನ್ನಲ್ಲಿ ಕೂಟಸ್ಥನ ಮಾಡು ನಿಃಕಳಂಕ ಮಲ್ಲಿಕಾರ್ಜುನಾ”

ಅದರಲ್ಲಿಯೇ ಬೆರೆದ ಭಾವದ ಅಮ್ಮನವರ ಮಧುರವಾಣಿ ಸೂಸಿ ಬಂದಿತು : “ಬೆಳಗು ಬೆಳಗು ಹಳಚುವಲ್ಲಿ ಮಹಾಬೆಳಗು ಅಲ್ಲವೇ?

“ಕ್ರಿಯಾಪೂಜೆ ಒಡಲಾದ ಮತ್ತೆ ಪೂಜಿಸಲಿಲ್ಲ-
ಜ್ಞಾನನೇತ್ರ ಮುಸುಕು ತೆಗೆದ ಮತ್ತೆ ಏನುವ ನೋಡಲಿಲ್ಲ.
ಧ್ಯಾನವು ನಿಧಾನಿಸಿನಿಂದ ಮತ್ತೆ ಏನುವ ನೆನೆಯಲಿಲ್ಲ.

ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ
ಕ್ರಿಯಾನಿವಾಸಿಸ್ಥಳ"

ಅಂದಿನಿಂದ ಮುಂದೆ 'ನನಗೆ ನಿನಗೆ ಬೇರೊಂದೆಡೆಯುಂಟೇ ನಿಃಕಳಂಕ ಮಲ್ಲಿಕಾರ್ಜುನಾ' ಎಂಬ ಭಾವ ಎರಕವಾಯಿತು ಮಾರಯ್ಯನವರಿಗೆ

ಶರೀರಗಳು ಬಲಗುಂದಿದರೂ ಆತ್ಮತೇಜ ಸ್ಫುರಿಸುವ ತೇಜಃಪುಂಜ ಮುಖಮಂಡಲದ, ಶಿಥಿಲವಾಗದ ಸದ್ಭಾವಫಲದ, ಶಿವಯೋಗಿ-ಶಿವಯೋಗಿಣಿಯರ ಸೇವೆಯನ್ನು ಬಹುದಿವಸ ಮಾಡಿ ಮೋಳಿಗೆಯ್ಯಕೇರಿಯ ಭಕ್ತರು ಧನ್ಯರಾದರು; ಅವರ ಅಮರವಾಣಿಗಳನ್ನು ಕೇಳಿ ತಮ್ಮ ಮಾಲಿನ್ಯವನ್ನು ಕಳೆದುಕೊಂಡು ಪಾವನಚಿತ್ತರಾದರು. ಮಾರಯ್ಯನವರು ನೂರಿಪ್ಪತ್ತು ವರುಷವಿದ್ದರೆಂದು ಅವರ ಉದ್ಗಾರ ವಚನಗಳಿಂದಲೇ ತಿಳಿಯುತ್ತದೆ. ಈಗಲೂ ಕ್ವಚಿತ್ತಾಗಿ ಇಂತಹ ಉದಾಹರಣೆಗಳು ಸಿಕ್ಕುತ್ತಿರುವಾಗ ಆ ಕಾಲದಲ್ಲಿ ಅಂತಹ ಸತ್ವಯುತರಿಗೆ ಅಷ್ಟು ಆಯುಷ್ಯ ಅಸಂಭವವೇನೂ ಅಲ್ಲ. ಮಾರಯ್ಯನವರ ಹಾಗು ಮಹಾದೇವಿಯಮ್ಮನವರ ವಚನಗಳ ಪ್ರತಿ ಮಾಡುತ್ತಲೇ ಮಹಾಲಿಂಗ ಶಿವಯೋಗಿ ಬಯಲಾದನು.

ಮಹಾದೇವಿಯಮ್ಮ ಮಾರಯ್ಯನವರಲ್ಲಿ, ಅವರಿಬ್ಬರು ನಿಃಕಳಂಕ ಮಲ್ಲಿಕಾರ್ಜುನಲಿಂಗದಲ್ಲಿ ಸಾಮರಸ್ಯ ಹೊಂದಿ ನಿರವಯಲನೈದಿದರು. ಕಾಯಜೀವದ ಹೊಲಿಗೆಯ ಬಿಚ್ಚಿದ, ಮಾನವತೆಯ ಮಹಾಸಿದ್ಧಿಯನ್ನು ಸಾಧಿಸಿದ ಆ ದೇವಮಾನವ ದಂಪತಿಗಳು ಏಕಕಾಲಕ್ಕೆ ಮಹಾಬಯಲ ಬೆರೆದರೆಂಬುದೇ ಸಮುಚಿತವಾಗಿದೆ.

ಅವರ ಅನುಷ್ಠಾನದ ಗವಿಯಲ್ಲಿ ಲಿಂಗಸ್ಥಾಪನೆಯಾಗಿದೆ. ಕಾಯಕ ನಿಲ್ಲುತ್ತ ಬಂದಾಗ, ಸನಿಹದಲ್ಲಿಯೇ ಅನ್ಯರ ಸಹಾಯದಿಂದ ಛಲಕ್ಕಾಗಿ ಕೊನೆಯಸಲ ಕಡಿದು ತಂದೊಗೆದ ಹಸಿಯ ತುಂಡೊಂದು ಆಶ್ರಮದ ಮುಂದೆ ಮಣ್ಣಲ್ಲಿ ಸೇರಿ ಮೊಳೆತು ಬೆಳೆಯಿತಂತೆ. ಅದುವೇ ಈಗ ಇಲ್ಲಿರುವ ಹೆಸರಿಲ್ಲದ ಮಹಾವೃಕ್ಷವೆಂದು ಸಾಂಪ್ರದಾಯಿಕ ನಂಬಿಗೆಯಿದೆ. ಮೋಳಿಗೆಯ್ಯಕೇರಿ ಈಗ ಮೋಳಕೇರಿಯಾಗಿದೆ.

## ೧೫. ಮಾರಯ್ಯನವರ ಸದ್ಭಾವ ಸೂಕ್ತಿಗಳು

ಮಾರಯ್ಯ–ಮಹಾದೇವಿಯವರ ವಚನಗಳ ಶೈಲಿಯು ಶರಣರ ಸಾಂಪ್ರದಾಯಕ ಶೈಲಿಗಿಂತ ಭಿನ್ನವಾಗಿದೆ. ಉತ್ತರ ವಯಸ್ಸಿನಲ್ಲಿ ಕಾಶ್ಮೀರದಿಂದ ಬಂದು ಕನ್ನಡ ಕಲಿತು, ಚರ್ಚೆಯಲ್ಲಿಯ ಅನುಭಾವಸಾಹಿತ್ಯದಿಂದ ಪದ ಪ್ರಯೋಗಗಳನ್ನು ಅಳವಡಿಸಿಕೊಂಡು ರಚಿಸಿದ ವಚನಗಳವು. ನಿರ್ದಾಕ್ಷಿಣ್ಯದ ತೀಕ್ಷ್ಣ ಭಾವದ ಸ್ಪಷ್ಟ ನುಡಿಗಳವು. ತಪ್ಪು ಕಂಡಲ್ಲಿ ಸಿಡಿಮಿಡಿಗೊಂಡ ನುಡಿಗಿಡಿಗಳೂ ಅವುಗಳಲ್ಲಿವೆ. ನೀತಿಯ ನೆಲೆ, ತಾತ್ವಿಕ ರಹಸ್ಯ, ಸಾಹಿತ್ಯದ ಸೊಬಗು, ಕಾವ್ಯಸೌಂದರ್ಯ ಇವೆಲ್ಲವನ್ನೂ ಅವರ ವಚನಗಳಲ್ಲಿ ಕಾಣಬಹುದು. ಅವರ ವೈರಾಗ್ಯದಂತೆ ಅವರ ಅನ್ಯಭಾಷಾ ಸಾಹಿತ್ಯರಚನೆಯೂ ಒಂದು ಅದ್ಭುತ ಸಂಗತಿಯೇ ಆಗಿದೆ. ಅವರ ವಚನಗಳಲ್ಲಿ ಮಿಂಚುವ ಸೂಕ್ತಿಮೌಕ್ತಿಕಗಳಲ್ಲಿ ಕೆಲವನ್ನು ಇಲ್ಲಿ ಕೊಡಲಾಗಿದೆ.

೧. ಅಪ್ಪು ಬೆರಸಿದ ಕಟ್ಟಿಗೆಯ ಕಿಚ್ಚಿನೊಳಗಿಕ್ಕಿದಡೆ ಅದು ಚಿತ್ತಶುದ್ಧವಾಗಿ ಹೊತ್ತಬಹುದೇ ಕಾಯ್ದಾರಿದ ಕಟ್ಟಿಗೆಯಂತೆ?

೨. ಅರಗಿನ ಪುತ್ಥಳಿಯು ಉರಿಯ ಮನೆಯ ಹೊಕ್ಕಂತಿರಬೇಕು.

೩. ಅರಿದೆನೆಂಬುದು ಅದು ತಾ ಅರಿವೋ ಮರವೆಯ ತೆರನೋ? ಇದು ಎನಗೆ ಅರಿಯಬಾರದು. ಅರಿವೆಗೆ ಕುರುಹು ಉಂಟೇ?

೪. ಅರಿದಡೆ ತಾನೇ! ಮರೆದಡೆ ಮಾಯೆ!

೫. ಅರಿದ ಮತ್ತೆ ಯಥಾರ್ಥಕ್ಕೆ ತೆರಹಿಲ್ಲ. ಹಿಳಿವುದಕ್ಕೆ ಅಂಗವಿಲ್ಲ. ಅರಿವುದಕ್ಕೆ ಆತ್ಮವಿಲ್ಲ.

೬. ಅರಿದಲ್ಲದೆ ಇಷ್ಟಪ್ರಾಣ ಸಮರ್ಪಣವಿಲ್ಲ.

೭. ಅರಿದವನಂಗ ದಗ್ಧಪಟದಂತೆ! ಚೆಂದ ನುಲಿಯಂತೆ! ಬೆಳಗಿನ ರೂಪದಂತೆ! ಉದಕದ ಪ್ರತಿಬಿಂಬದಂತೆ!

೮. ಅರಿದೆನೆಂಬುದೇನೋ ಮರೆದೆನೆಂಬುದೇನೋ ಅರಿವು ಮರೆವು ಇವೆರಡರ ಎಡೆಯಲ್ಲಿ ಇದರ ತೆರನರಿಯೋ!

೯. ಅರುಹು ಕುರುಹ ನುಂಗಿ, ಕುರುಹು ಅರವಿನಲ್ಲಿ ಲೇಪವಾಗಬೇಕು.

೧೦. ಅರ್ತಿಗೆ ಆಡುವ ಸತ್ಯವಂತರಿಗೆ ಇನ್ನೆತ್ತಣ ಮುಕ್ತಿಯೋ?

೧೧. ಅಂಗಲಿಂಗ ಉಭಯದ ಸಂಗ ಹರಿದಾಗಲೇ ಪ್ರಾಣಲಿಂಗ!

೧೨. ಅಂಬು ಇಲ್ಲದಿದ್ದರೆ ಅಂಬುಜವನಾರು ಬಲ್ಲರು? ನಾನಿಲ್ಲದಿದ್ದಡೆ ನಿನ್ನನಾರು ಬಲ್ಲರು?

೧೩. ಆತ್ಮವುಳ್ಳನ್ನಕ್ಕ ಅರಿವೆಂಬುದ ವಿಚಾರಿಸಬೇಕು.

೧೪. ಆದಿ ಶೂನ್ಯಲಿಂಗಕ್ಕೆ ಮಜ್ಜನವಾವುದೋ? ಬಯಲಿಗೆ ಎಣ್ಣೆ ಹೂಸಿ ಸ್ನಾನ ಮಾಡಿಸುವದೆಂತು?

೧೫. ಆನಂದಕ್ಕತೀತ ಸ್ವಾನುಭಾವಾತ್ಮಕ ನಿಃಕಳಂಕ ಮಲ್ಲಿಕಾರ್ಜುನ.

೧೬. ಆಶೆಯೆಂಬ ತೊರೆಯು ಹಾಯಬಾರದೆ ಹರಿಯುತ್ತಿದೆ; ಮತ್ತೇತಕಯ್ಯಾ ಪರಬ್ರಹ್ಮದ ಮಾತು?

೧೭. ಆಳಾಗಿದ್ದು ಅರಸಾಗಬಹುದಲ್ಲದೆ, ಅರಸಾಗಿದ್ದು ಆಳಾಗಬಾರದು.

೧೮. ಇಷ್ಟದ ದೃಷ್ಟವ ಕಾಣದ ಚಿತ್ತ, ಆತ್ಮನಲ್ಲಿ ಕಟ್ಟುವೊಡೆಯ ಬಲ್ಲದೆ?

೧೯. ಇಷ್ಟಲಿಂಗವ ಪೂಜಿಸುವನಿರವು ಹಿಮಾಚಲದ ಶಿಲೆಯಂತಿರಬೇಕು.

೨೦. ಉದಕವಿಲ್ಲದಿರೆ ಅಂಬುಧಿ–ತಟಾಕಗಳೆಂಬ ನಾಮವುಂಟೇ?

೨೧. ಉರಿ ಸೋಂಕಿದ ಕರ್ಪುರಕ್ಕೆ ನೆಲೆ ಇನ್ನಾವುದು?

೨೨. ಊರು ಕೆಟ್ಟು ಸೂರೆಯಾಡುವಲ್ಲಿ ಅರಿಗಾರೂ ಇಲ್ಲ.

೨೩. ಎರವಿನ ದ್ರವ್ಯ ಸ್ಥಿರವಲ್ಲವೆಂಬರು. ಹೊಕ್ಕು, ಅವರು ಕೊಡುವದಕ್ಕೆ ಮುನ್ನವೇ ಕೈಯಾಂತು ಬಳಲುವ ಗಡ್ಡಯ್ಯಗಳ ನೋಡಿ ಬೇಗಾದೆನಯ್ಯಾ!

೨೪. ಕಣ್ಣಿನಲ್ಲಿ ಕಸ ಹೊಕ್ಕರೆ ಕೈ ಹಗೆಯೇ ಅಯ್ಯಾ?

೨೫. ಕಣ್ಣಿನಿಂದ ಕನ್ನಡಿ ನೋಡಿ ಕಣ್ಣ ಕಲೆಯ ಕಾಂಬಂತೆ ತನ್ನಿಂದ ತಾ ತನ್ನನರಿಯಬೇಕು.

೨೬. ಕತ್ತಿ ಬತ್ತಲೆಯಾದರೆ ನೆಟ್ಟನೆ ನಿರ್ವಾಣಿಯೇ?

೨೭. ಕರಗಿದ ಬಂಗಾರಕ್ಕೆ ಕಂಚಾಣಗಳು ಇಲ್ಲದಂತೆ. ಆತ ಕುರುಹಡಗಿದ ಷಟ್‍ಸ್ಥಲಬ್ರಹ್ಮಿ!

೨೮. ಕಾಯದ ಕೈಯಲ್ಲಿ ಲಿಂಗಪೂಜೆ; ಮನದ ಕೈಯಲ್ಲಿ ಸಂಸಾರ! ಎಂತಹದಯ್ಯಾ ಲಿಂಗಪೂಜೆ?

೨೯. ಕಾಯಿ ಹಣ್ಣಹುದು; ಉಭಯದೊಡಲೊಂದೇ!

೩೦. ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಾರ್ಪಿತವಲ್ಲದೆ ದುರಾಶೆಯಿಂದ ಬಂದುದು ಅನರ್ಪಿತ!

೩೧. ಕುರುಳಿನಲ್ಲಿ ಕೂಳು ಕಟ್ಟಿಕೊಂಡು ಕೂದಲು ಶೋಧಿಸಬಹುದೇ ಅಯ್ಯಾ?

೩೨. ಕುಸುಮದಲ್ಲಿ ವಾಸನೆ ಇದ್ದೊಡೇನೊ ಅದು ಎಸೆಯದನ್ನಕ್ಕ?

೩೩. ಕೆಸರೊಳಗೆ ಮುಳುಗಿ ಹೊಸ ಸೀರೆಯೆಂದರೆ, ಆದರ ನಾಶ ಕುಸುಕಿರಿಯದೇ ಮಾಣ್ಬುದೇ?

೩೪. ಕೈಯಲ್ಲಿ ಲಿಂಗ ಹಿಡಿದುಕೊಂಡು, ಕಣ್ಣಲ್ಲಿ ನೋಡಿ ಮನ ಮುಟ್ಟದಿರ್ದಡೇನಾಯ್ತು?

೩೫. ಕೊಟ್ಟೆನೆಂಬುದು ಆಶೆಯೋ ನಿರಾಶೆಯೋ?

೩೬. ಕಂಡಕಂಡವರಿಗೆ ಲಿಂಗವ ಕೊಟ್ಟ ಗುರು ದ್ರವ್ಯಕ್ಕೆ ಹಂಗಿಗನಾದ.

೩೭. ಕ್ರೀ ಇಲ್ಲದೆ ಸತ್ಯ ನಿಲ್ಲಬಹುದೇ?

೩೮. ಗಾಣದಲ್ಲಿ ಸಿಲುಕಿದ ಎಳ್ಳು, ನೋಯದೆ ಎಣ್ಣೆಯ ಬಿಡುವದೇ?

೩೯. ಗುರುವೆಂದಡೆ ತನು, ಲಿಂಗವೆಂದಡೆ ಆತ್ಮ, ಜಂಗಮವೆಂದಡೆ ಆತ್ಮನ ಅರಿವು.

೪೦. ಗುರುಸ್ಥಲ ವೇದಾಂತ, ಲಿಂಗಸ್ಥಲವೇ ಸಿದ್ಧಾಂತ, ಜಂಗಮ ಸ್ಥಲವೇ ಪ್ರಸಿದ್ಧಾಂತ.

೪೧. ಘೋರ ಸಂಸಾರವ ಕಂಡು ನಾಚದೇಕೆನ್ನ ಮನ?

೪೨. ಜಗದ ಜತ್ತಿಗೆ ಹೊನ್ನು, ಹದಿನೆಂಟು ಜಾತಿಯ ಮನೆಯಲ್ಲಿ ತೊತ್ತಾಗಿ ಹುಟ್ಟಿದ ಶಿವದ್ರೋಹಿ.

೪೩. ಜೀವನ ಕಡಿದಂಗಿಲ್ಲದ ಪಾಪ ಕತ್ತಿಗುಂಟೇ? ಎಚ್ಚವನಿದ್ದಂತೆ ಅಂಬಿಗೆ ಮುನಿವರೇ? ಕೊಲ್ಲಿಸಿದ ಅರಸನಿದ್ದಂತೆ ಬಂಟನಿಗೆ ಮುನಿವರೇ?

೪೪. ಜ್ಞಾನಿಯ ಸಂಗ ಸೌಖ್ಯದ ಠಾವಿನಂತಿರಬೇಕು.

೪೫. ತನ್ನ ಮರೆದು ವಸ್ತುವ ಕುರಿತು ನಿಂದ ಮತ್ತೆ ಐತ್ತಲೆಯಾದವರಿಗೆ ಎತ್ತಲೂ ಭಯವಿಲ್ಲ.

೪೬. ತನ್ನಲ್ಲಿ ಬಂದ ಗುಣದೋಷವ ಅನ್ಯರು ನುಡಿದರೆಂದು ಭಿನ್ನವ ಮಾಡಿ ನೋವನ್ನಕ್ಕ ಭಕ್ತಂಗೆ ಸತ್ಯವಿಲ್ಲ, ವಿರಕ್ತಂಗೆ ಜ್ಞಾನವಿಲ್ಲ ........ಕಣ್ಣೊಳಗಣ ಕಸ, ಕಾಲೊಳಗಣ ಮುಳ್ಳು ಆವಬಗೆಯಿಂದ ಹೋದರದು ಲೇಸು-

೪೭. ತಾನೆಂಬುದನೆ ಅರಿಯುದನ್ನಕ್ಕ ಎಲ್ಲ ನೇಮವ ಭಾವಿಸಬೇಕು.

೪೮. ತಾನು ಹೊಳೆಯಲ್ಲಿ ಮುಳುಗುತ್ತ, ಈಸಬಲ್ಲವರ ಗಂಡನೆಂಬಂತೆ!

೪೯. ದೃಢಚಿತ್ತಂಗೆ ಕಡೆನೋದಲಿಲ್ಲ.

೫೦. ನಾದ ಪೀಠ, ಬಿಂದು ಲಿಂಗ, ಕಳೆವಸ್ತು.

೫೧. ನಾ ಬಡವನಾದರೆ ನೀ ಬಡವನೇ ನಿ. ಮ.

೫೨. ನಿಜಲಿಂಗಾಂಗಿಗೆ ಇಹಪರವೆಂಬ ಭೇದವಿಲ್ಲ.

೫೩. ನಿಶ್ಚೈತ್ಯವೆಂದರೆ ಬಚ್ಚಬರಿಯ ಬಯಲು.

೫೪. ನೀಡಿದ ಮತ್ತೆ ನಿಜವಸ್ತುವಿನಲ್ಲಿರಬೇಕು.

೫೫. ನೀವಿಲ್ಲದಿರೆ ನಾನೆಂಬ ಭಾವವುಂಟೇ?

೫೬. ನೆರೆ ಅರಿದ ಅರಿವು ಮರೆದ ಮತ್ತೆ ಬೇರೊಬ್ಬ ಅರಿವನುಂಟೇ?

೫೭. ನೆಲ ತಳವಾರವಾದರೆ ಕಳ್ಳಂಗೆ ಹೋಗಲೆಡೆಯುಂಟೇ?

೫೮. ನೇಮಕ್ಕೆ ಕುಟಿಲವಿಲ್ಲದೆ ನಿಂದ ಸದ್ಭಕ್ತನ ಬಾಗಿಲ ಬಚ್ಚಲ ಕಲ್ಲೆನಗೆ ನಿಶ್ಚಯದ ಕೈಲಾಸ!

೫೯. ಪರಿಪೂರ್ಣ ಲಿಂಗಕ್ಕೆ ನೈವೇದ್ಯವಾವುದೋ?

೬೦. ಪುಣ್ಯವನರಿವನ್ನಕ್ಕ ಪೂಜೆ ಬೇಕು.

೬೧. ಪ್ರಾಣದ ಪ್ರಕೃತಿಯ ಭಾವಿಸಿದಾಗ ಪರಮ ಪ್ರಕಾಶ.

೬೨. ಬಟ್ಟೆಯನರಿಯದ ಗುರು, ಸೃಷ್ಟಿಯನರಿಯದ ಶಿಷ್ಯ, ವ್ಯರ್ಥವಾಯಿತಲ್ಲ ಕಟ್ಟಿದ ಲಿಂಗ.

೬೩. ಬಯಲು ಬತ್ತಲೆಯಾದರೆ ಹೊದ್ದಿಸುವರಿನ್ನಾರು? ಎರಿ ನೀರು ಕುಡಿದರೆ ಬಿಡಿಸುವರಿನ್ನಾರು? ಮೇರು ನಡೆವಡೆ ಪಥವನಿಂಬುಗೊಡುವರಾರು? ಅರಿದವನೆ ಮರೆದಡೆ ಅರಿವ ಹೇಳುವವರಿನ್ನಾರು?

೬೪. ಬರಡಿಯ ಕೈಯಲ್ಲಿ ಮಕ್ಕಳಿದ್ದರೆ ತೊರೆವುದೆ ನೋಡಿ? ಅರಿವು ಹೀನರ ಅಂಗದಲ್ಲಿ ಕುಸುಮ ಇಡಲಾಗಿ ಅವರು ಅದ ಬಲ್ಲರೇ?

೬೫. ಬಲ್ಲವ ಗೆಲ್ಲಸೋಲಕ್ಕೆ ಹೋರಿದಡೆ, ಕೊಲ್ಲ ಹೃದಯ ಬಲ್ಲುದೆ ಬಲ್ಲವರ ಇರವ?

೬೬. ಬಲ್ಲವರಿಗೆ ಗುಣವೇ ಪ್ರಾಣ.

೬೭. ಬೀಗವ ತೆಗೆದಲ್ಲಿ ಕಂಡಿತ್ತು ಆಭರಣದಿರವು.

೬೮. ಭಕ್ತ ತಾ ಮಾಡುವ ಕಾಯಕ ತನಗೆಂದಡೆ ಗುರುವಿಂಗೆ ದೂರ! ಸತಿಗೆಂದಡೆ ಲಿಂಗಕ್ಕೆ ದೂರ! ಸುತರಿಗೆಂದಡೆ ಜಂಗಮಕ್ಕೆ ದೂರ! ಬಂಧುಗಳಿಗೆಂದಡೆ ಸಕಲ ಶರಣರಿಗೆ ದೂರ!

೬೯. ಭಕ್ತಿಗೆ ಕ್ರೀ; ವಿರಕ್ತಿಗೆ ನಿರವಯುವ!

೭೦. ಭಕ್ತಿಯಲ್ಲಿ ಬಲೆ, ಚಿತ್ತದಲ್ಲಿ ಕತ್ತಲೆ ಇದ್ದವರಿಗೆ ಇನ್ನೆಲ್ಲಿಯದೋ ಭಕ್ತಿಶೀಲ!

೭೧. ಭಕ್ತಿಹೀನಂಗೆ ನಿತ್ಯಾನಿತ್ಯವ ಹೇಳಲು ನಿಶ್ಚಯಿಸಬಲ್ಲನೇ?

೭೨. ಭಾವದ ಮಧ್ಯದಲ್ಲಿ ನಿಂದು, ಓಂಕಾರದ ಸ್ವರೂಪವನರಿ.

೭೩ ಭಾವ ನಿರ್ಭಾವವಾದಲ್ಲಿ ನಿಃಕಳಂಕ ಮಲ್ಲಿಕಾರ್ಜುನ ತಾನುತಾನೇ!

೭೪. ಭಂಡಾರವಿದ್ದೊಡೇನೋ ತಾನುಂಬುದು ಪಡಿಯಕ್ಕಿ, ಒಂದಾವಿನಹಾಲು, ಮಲಗುವದರ್ಧ ಮಂಚ.

೭೫. ಮಣ್ಣಬೆಕ್ಕು ನನ್ನಿಯ ಮೂಷಕನ ಮುಟ್ಟೆದುದುಂಟೇ?

೭೬. ಮನ್ನಣೆ ಇಲ್ಲದ ಠಾವಿನಲ್ಲಿ ಅಣ್ಣ ಅಪ್ಪ ಎನ್ನಲೇಕೆ?

೭೭. ಮರ್ತ್ಯದೊಳಗೆ ಈಶಲಾಂಛನ ಹೊತ್ತವರಿಗೆಲ್ಲ ನಿತ್ಯತ್ವವುಂಟೇ?

೭೮. ಮಹಾತ್ಮರ ಸಂಗ ಮಹಾನುಭಾವದಿಂದಲ್ಲದೆ ಕಾಣಬಾರದು.

೭೯. ಮಾತಿನ ಮಾಲೆಯು ಕಲಿತು ಸಂತೆಯು ಹೋತಿನಂತೆ ಹೋರುವ ಕೂತಜ್ಞಾನಿಗಳಿಗಿನ್ನೇತರ ವಿರಕ್ತಿ ?

೮೦. ಮಾತಿನಲ್ಲಿ ಭಕ್ತಿ ಮನದಲ್ಲಿ ಕತ್ತರಿ !

೮೧. ಮಾತಿನ ಮಕ್ಕಳಿಗಿಲ್ಲ ಜಗದೀಶನೊಲುಮೆ.

೮೨. ಮಾತಿನ ಗೆಲ್ಲ ಸೋಲದಲ್ಲಿ ಅಜಾತನ ಅರಿಯಬಾರದು.

೮೩. ಮಾತಿಗೆ ಮಾತನಾಡಿಹೆನೆಂದಡೆ ಪಥಕ್ಕೆ ಕಡೆಮೊದಲಿಲ್ಲ.

೮೪. ಮೀರಿ ತೋರಿದ ಘನ ತನ್ನಲ್ಲಿ ನಿರ್ಲೇಪ.

೮೫. ಮೂಕೊರೆಯನ ಕೈಯಲ್ಲಿ ಕುಸುಮವ ಕೊಟ್ಟರೆ ಅದು ಅವನಿಗೆ ಲೇಸೋ ಕಷ್ಟವೋ ? ಭಕ್ತಿಹೀನರಿಗೆ ಸತ್ಯವ ಹೇಳಿದರೆ ಅದೇತರ ಸುದ್ದಿಯೋ?

೮೬. ಮೊದಲುಗೆಟ್ಟು ಲಾಭವನರಸುವ ಪರಿ ಇನ್ನೆಂತೋ ?

೮೭. ಮಂಜಿನ ರಂಜನೆಯ ನೀರಿಗೆ ತಟಾಕ ತುಂಬಿದುದುಂಟೇ ?

೮೮. ಮಂಡೆ ಮಾಸಿದಡೆ ಮಜ್ಜನವ ಮಾಡಬೇಕು. ಮನ ಮರೆದು ಮಾಸಿದಡೆ ಮಹಾತ್ಮರ ಗುಣಜಲದಿಂದಲ್ಲದೆ ಅಮಲವಾಗದು.

೮೯. ಲಿಂಗದಲ್ಲಿ ಸಂದಳಿದು ನಿಂದುದೇ ನಿಜ!

೯೦. ಲಿಂಗವನರಿದವಂಗೆ ಜಗದ ಹಂಗಿಲ್ಲ.

೯೧. ಲೌಕಿಕಾರ್ಚನೆಯ ಮಾಡುವ ಪೂಜಕರ ಮೆಚ್ಚನೆಂದ ನಿಃಕಳಂಕ ಮಲ್ಲಿಕಾರ್ಜುನ.

೯೨. ವೇದಾಂತವ ನುಡಿವವರ ಬಲ್ಲೆ, ಸಿದ್ಧಾಂತವ ನಡೆವವರ ಕಾಣೆ!

೯೩. ಸಚ್ಚಿದಾನಂದನ ಸಂಗ ಬಚ್ಚಬಯಲು.

೯೪. ಸತ್ವಗೆಟ್ಟಲ್ಲಿ ಕಾಷ್ಟವನೂರಿ ನಡೆಯಬೇಕು.

೯೫. ಸದ್ಗುರುವಾದರೆ ಬದ್ಧನಾಗದಿರಬೇಕು. ಮಂದಾರದಲ್ಲಿ ತೋರುವ ಸುಗಂಧದಂತಿರಬೇಕು.

೯೬. ಹರಗೋಲನೇರಿದರೆ ಅದ ಹಿಡಿವ ಪರಿಯನರಿದಿರಬೇಕು.

೯೭. ಹುತ್ತವ ಬಡಿದರೆ ಸರ್ಪಸಾಯಬಲ್ಲದೆ? ನಾ ಭಕ್ತನೆಂದರೆ ಶಿವನು ಒಪ್ಪಗೊಂಬನೇ ನಿಶ್ಚಟರಿಗಲ್ಲದೆ?

೯೮. ಹೊಳೆಯ ಹಗುರದಿಂದ ಹಳ್ಳವ ಹಾಯಬೇಕು.

## ಮಹಾದೇವಿಯಮ್ಮನ ಸದ್ಭಾವ ಸೂಕ್ತಿಗಳು:

೧. ಆವ ಬೀಜವ ಬಿತ್ತಿದರೂ ಭೂಮಿಗೆ ಬೇರು, ಬಯಲಿಗೆ ಶಾಖೆ! ಐಕ್ಯಕ್ಕೆ ಮರೆ, ಕ್ರೀಗೆ ಬಾಹ್ಯ!

೨. ಇಷ್ಟದಲ್ಲಿ ನೋಟ, ಜ್ಞಾನದಲ್ಲಿ ಕೂಟ, ಏಕಾರ್ಥವಾದಲ್ಲಿ ಕಾಯವೆಂಬ ಕದಳಿ ಬಿಟ್ಟುದು.

೩. ಎಸೆವರ ಬಲ್ಲೆ; ಎಚ್ಚ ಬಾಣ ತಿರುಗಿ ಬಪ್ಪಂತೆ ಎಸೆವರ ಕಾಣೆ. ಲಿಂಗಪೂಜಿಸುವವರ ಬಲ್ಲೆ. ಪೂಜಿಸಿದ ಲಿಂಗ ಅಭಿಮುಖವಾಗಿ ಸರ್ವಾಂಗ ದಲ್ಲಿ ಭೇದಿಸುವರ ಕಾಣೆ!

೪. ಕಾಯದ ಜೀವದ ಭೇದವನರಿದಲ್ಲಿ ಅತ್ತಲಿತ್ತಲೆಂದು ಮತ್ತೆ ಹಲುಬಲಿಲ್ಲ.

೫. ಕೈಯಲ್ಲಿ ಜ್ಯೋತಿಯ ಹಿಡಿದು ಕತ್ತಲೆಯೆನಲೇತಕ್ಕೆ?

೬. ಕ್ಷುತ್ತು ನಿವೃತ್ತಿಯಾದಮೇಲೆ ಕಟ್ಟೋಗರದ ಹೊರೆಯ ಹೊರ ಲೇತಕ್ಕೆ?

೭. ಬೀಜದೊಳಗಣ ವೃಕ್ಷದ ಹಣ್ಣನಾರು ಮೆಲಬಲ್ಲರು? ಸಸಿಯೊ ಳಗಣ ಲತೆ ಪರ್ಣ ತಲೆದೋರದೆ ನರುಗಂಪಿನ ಕುಸುಮವ ಆದಾರು ಮುಡಿವರು?

೮. ಸಕಲದಲ್ಲಿ ಅಳಿದು ನಿಃಕಲದಲ್ಲಿ ಉಳಿದು ಮತ್ತೆ ಸಕಲವ ಕೂಡಿ ಹೆನೆಂಬ ನಿಃಕಲವುಂಟೇ?

# ಅನುಬಂಧ

## ಚರಿತ್ರೆಯ ಮೂಲ ಸಂಗತಿಗಳಿಗೆ ಪ್ರಮಾಣ ವಿಚಾರ

(೧)

ಕರ್ನಾಟಕದ ವೀರಬಣಂಜು ಸಂಘಗಳ ಸದಸ್ಯರು ಭಾರತದ ಉತ್ತರಕ್ಕೆ ಹೋಗಿ ಕಾಶ್ಮೀರ -- ಅಫಗಾಣಿಸ್ತಾನಗಳ ಮುಖಾಂತರ ಮಧ್ಯಏಶಿಯಾ ದೇಶಗಳೊಡನೆ ವ್ಯಾಪಾರ ನಡಿಸುತ್ತಿದ್ದರು. ಧಾರ್ಮಿಕಾಚಾರಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರು. ಕೈಲಾಸ ನಿಶಾನೆ (ಕಾವಿಯ ಬಾವುಟ) ಶ್ವೇತಛತ್ರ (ಬಿಳಿಯ ಕೊಡೆ) ಧರಿಸುತ್ತಿದ್ದರು.

ಇವರು ಬಸವೇಶ್ವರರ ವಿಚಾರ ಕ್ರಾಂತಿಯ ಪ್ರಚಾರ ಮಾಡುತ್ತಿದ್ದರು.

ಕಾಶ್ಮೀರದಿಂದ ಕರ್ನಾಟಕಕ್ಕೆ ಕರ್ನಾಟಕದಿಂದ ಕಾಶ್ಮೀರಕ್ಕೆ ಬರುಹೋಗುವ ವಿದ್ವಾಂಸರಿಗೆ ತತ್ವಜ್ಞಾನಿಗಳಿಗೆ ತಮ್ಮ ಜತೆಯಲ್ಲಿ ಸಂಚಾರ ಸೌಕರ್ಯ ಒದಗಿಸುತ್ತಿದ್ದರು.

ವೀರಬಣಂಜು ಸಂಘಗಳ ಕೇಂದ್ರಸಂಸ್ಥೆಯು ಕಲ್ಯಾಣದಲ್ಲಿತ್ತು.

ಚಾಲುಕ್ಯ ಸಾಮ್ರಾಜ್ಯದ ರಾಜಧಾನಿ ಕಲ್ಯಾಣವು ದಕ್ಷಿಣಭಾರತದ ಮಹಾನಗರವಾಗಿತ್ತು.

ಶಿಕಾರಿಪುರ, ಅರಸಿಕೆರೆ, ಹಿರಿಯೂರು, ಮುತ್ತಗಿ ಶಾಸನಗಳು. ಭಾರತದ ಮಧ್ಯಕಾಲದ ಐತಿಹಾಸಿಕ ಸಂಶೋಧನೆಗಳಿಂದ.

('ಬಸವೇಶ್ವರರ ಸಮಕಾಲೀನರು' ಗ್ರಂಥ-ಎರೆಸೀಮೆ ಶ್ರೀ ಚೆನ್ನಬಸವಪ್ಪನವರು.)

ಮೇಲೆ ಕಾಣಿಸಿದ ಗ್ರಂಥದಲ್ಲಿ ವಿವೇಚಿಸಿ ಸ್ವೀಕರಿಸಿದ ಅಭಿಪ್ರಾಯಗಳು.

ಇದು ೯ ನೇಶತಮಾನದ ರಾಷ್ಟ್ರಕೂಟರ ಕಾಲದಿಂದ ನಡೆದಿದ್ದಿತು. ಉದಾ:. ಮಹಾಲಿಂಗರಂಗ: ಕದಂಬರಾಜ್ಯದ ತಾಳಗುಂದಕ್ಕೆ ಬಂದ ಬ್ರಾಹ್ಮಣರು. ಇತ್ಯಾದಿ.

ಐಹೊಳಿ, ಬಳ್ಳೀಗಾಂವಿ, ಹಳೇಬೀಡುಸಂಘಗಳು ಕಲ್ಯಾಣದ ಮುಖಾಂತರ ವ್ಯವಹಾರ ಮಾಡುತ್ತಿದ್ದವು.

ಭೂಮಂಡಲದಲ್ಲಿ ಇಂಥ ನಗರವಿಲ್ಲವೆಂದು ವಿಜ್ಞಾನೇಶ್ವರ ಪಂಡಿತ ಹೇಳಿದ್ದಾನೆ.

(೨)

ಕಾಶ್ಮೀರ ಶೈವವು ಶೈವಪಂಥದ ಪ್ರಮುಖ ಪ್ರಕಾರವಾಗಿತ್ತು. ಕಾಶ್ಮೀರ ಕಡೆಯ ಅನೇಕ ಪಂಡಿತರು ಕಲ್ಯಾಣಕ್ಕೆ ಬರುತ್ತಿದ್ದರು. ಅವರು ಕಲ್ಯಾಣದಲ್ಲಿ ನಡೆದ ಶೈವತತ್ವ ವಿಚಾರದ ಮಂಥನ ತಿಳಿಯಲು ಕುತೂಹಲಿಗಳಾಗಿ ಬರುತ್ತಿದ್ದರು.

೯, ೧೦ನೆಯ ಶತಮಾನಗಳಿಂದಲೂ ಕಾಶ್ಮೀರದ ವಿದ್ವಾಂಸರು ಕರ್ನಾಟಕಕ್ಕೆ ಬರುತ್ತಿದ್ದರು. ಭಾರತದ ವಾಯುವ್ಯಭಾಗದಲ್ಲಿ ಯವನರ ದಾಳಿಯಿಂದುಂಟಾದ ರಾಜಕೀಯ ಅಭದ್ರತೆ ಅದಕ್ಕೆ ಕಾರಣವಾಗಿತ್ತು. ಕರ್ನಾಟಕದಲ್ಲಿ ಸುಭದ್ರ ರಾಜಕೀಯವಿತ್ತು.

(೩)

ಕರ್ನಾಟಕದಿಂದ ಜ್ಞಾನಿಗಳು ಅನುಭಾವಿಗಳು ಯೋಗಸಿದ್ಧರು ತತ್ವಜ್ಞಾನ ಪ್ರಚಾರಕ್ಕಾಗಿ ಕಾಶ್ಮೀರವರೆಗೆ ಸಂಚರಿಸುತ್ತಿದ್ದರು. ಶರಣರು ಉತ್ತರಕ್ಕೆ ಹೋಗಿ ಪ್ರಮಥರ ನೂತನ ವಿಚಾರಕ್ರಾಂತಿಯ ಪ್ರಚಾರಮಾಡುತ್ತಿದ್ದರು.

ತತ್ವಾಸಕ್ತಿಯ ಮೇಧಾವಿಗಳು ಬಸವಣ್ಣನವರ ಅದ್ಭುತ ವ್ಯಕ್ತಿತ್ವಕ್ಕೆ ಮನಸೋತು ಕಲ್ಯಾಣಕ್ಕೆ ಬರುತ್ತಿದ್ದರು.

ಅಲ್ಲಮ ಪ್ರಭುದೇವರು ಕಾಶ್ಮೀರದ ಸವಾಲಕ್ಷ ಪ್ರದೇಶಗಳಲ್ಲಿ ಸಂಚರಿಸಿದ್ದಾರೆ. ಮಾಯಾಕೋಲಾಹಲದ ನಂತರ ಪ್ರಭು ಕೆಲಕಾಲ ಅದೃಶ್ಯರಾಗಿದ್ದರೆಂದು ತಿಳಿಯಲ್ಪಟ್ಟಾಗ ಅವರು ಉತ್ತರಕ್ಕೆ ಹೋಗಿ ಹಿಮಾಲಯದ ಅಡಿಯಲ್ಲಿ-ಮುಖ್ಯವಾಗಿ ಕಾಶ್ಮೀರ ಕಣಿವೆಯ ಗುಹಾ ಪ್ರದೇಶಗಳಲ್ಲಿಯ ಸಾಧಕರಿಗೆ ಯೋಗಕ್ರಮವನ್ನು ಉಪದೇಶಿಸಿ ನೂತನ ಚೇತನವನ್ನಿತ್ತರು.

ಶ್ರೀ ಎರೆಸೀಮೆ ಚೆನ್ನಬಸವಪ್ಪನವರು 'ಬಸವೇಶ್ವರರ ಸಮಕಾಲೀನರು' ಗ್ರಂಥದಲ್ಲಿಯು ತಮ್ಮ 'ಮೊಳಿಗೆಯ ಮಾರಯ್ಯ' ಚರಿತ್ರೆಯಲ್ಲಿ ವಿವರಿಸಿದ್ದಾರೆ.

ಮಳಖೇಡಕ್ಕೆ ಬಂದ ಮಹಾಲಿಂಗರಂಗ, ತಾಳಗುಂದಕ್ಕೆ ಬಂದ ಅಗ್ರಹಾರದ ವಿದ್ವಾಂಸರು. ಕಲ್ಯಾಣಕ್ಕೆ ಬಂದ ಧರ್ಮಜಿಜ್ಞಾಸುಗಳು—ಮುಂತಾದವರು ಉದಾಹರಣೆಗಳಾಗಿದ್ದಾರೆ.

ಬಸವೇಶ್ವರರ ಸಮಕಾಲೀನರು ಗ್ರಂಥದಲ್ಲಿಯ ವಿವಿಧ ಲೇಖಕರು ವ್ಯಕ್ತಪಡಿಸಿದ ಆಧರಿತ ಅಭಿಪ್ರಾಯಗಳು.

'ವೀರಶೈವ ರತ್ನ' ಗ್ರಂಥ ಪುಟ-೩.

ಹರಿಹರ ಕವಿಯ ಬಸವರಾಜದೇವ ರಗಳೆ.

ಚೆನ್ನಬಸವ ಪುರಾಣ, ಶೂನ್ಯಸಂಪಾದನೆ, ಪ್ರಭುಲಿಂಗ ಲೀಲೆ.

| | |
|---|---|
| ಮೋಳಿಗೆಯ ಮ್ಯಾರಯನು ಕಾಶ್ಮೀರದಲ್ಲಿಯ ಅರಸೊತ್ತಿಗೆ ತ್ಯಜಿಸಿ, ವೈರಾಗ್ಯತಾಳಿ, ಕಲ್ಯಾಣಕ್ಕೆ ಬಂದು ಬಸವೇಶ್ವರರ ವಿಚಾರ ಕ್ರಾಂತಿಗೆ ಸೇರಿ ಶರಣನಾಗಿ ಅನುಭಾವ ಸುಖಪಡೆದವನು. ಅರಸನಾಗಿದ್ದಾಗಿನ ಹೆಸರು ಮಹಾದೇವ-ಭೂಪಾಲ. | ಮೋ. ಮಾರಯ್ಯನವರ ವಚನಗಳು, ರಾಣಿ ಮಹಾದೇವಿಯುವರ ವಚನಗಳು, ಇತರ ಶರಣರ ವಚನಗಳು, ೧೩ನೆಯ ಶತಮಾನದಿಂದ ೧೯ನೆಯ ಶತಮಾನದವರೆಗೆ ಹುಟ್ಟಿದ ಪೂರ್ಣ ಇಲ್ಲವೆ ಭಾಗಶಃ ಅವರ ಚರಿತ್ರ ಹೇಳುವ ಗ್ರಂಥಗಳು. (೧೫) ಪರಂಪರಾಗತ ಕಥನ, |
| ಮಹಾದೇವರಾಜನು ಕಾಶ್ಮೀರದಲ್ಲಿಯ ಸಪಾಲಕ್ಷ (ಸಪಾಪಲಕ್ಷ) ಪ್ರದೇಶದ ರಾಜನು. | ೧೪ನೆಯ ಶತಮಾನದೀಚೆಯ ಗ್ರಂಥಗಳು ಕಾಶ್ಮೀರದರಸನೆಂದು ಹೇಳಿವೆ. ಈ ಸತಿಪತಿಗಳ ವಚನಗಳಿಂದ 'ಸವಾಲಕ್ಷ' ಎಂದು ತಿಳಿಯುತ್ತದೆ. ಬಾಬರನ ಇತಿಹಾಸದಲ್ಲಿ ಕಾಶ್ಮೀರದ ಹಿಮಾಲಯದಡಿಯ ಬೆಟ್ಟಗಳ ಪ್ರದೇಶಕ್ಕೆ 'ಸವಾಲಾಖ' ಎಂದು ಹೇಳಲ್ಪಟ್ಟಿದೆ. ಆದಿಪಂಪ ಕವಿಯು ಇದೇ ಪ್ರದೇಶವನ್ನು ಸಪಾದಲಕ್ಷವೆಂದು ಉಲ್ಲೇಖಿಸಿದ್ದಾನೆ. ಇವುಗಳ ಸಮನ್ವಯದ ಗ್ರಹಿಕೆ ಪ್ರಬಲ ಆಧಾರವಾಗುವದು. ಚಿ. ಬ. ಪುರಾಣವೂ ಇದನ್ನು ದೃಢಪಡಿಸುತ್ತಿದೆ. |
| ಮಹಾದೇವ ರಾಜನ ರಾಣಿ ಗಂಗಾದೇವಿ. ಸ್ತ್ರೀಥವ ವಸ್ತ್ವಿನ ಮಗ ಲಿಂಗಾರತಿ ಇದ್ದರು. ಸೌಧಾನದಿ ತೀರದ ಮಾಂಡವ್ಯಪುರ ರಾಜಧಾನಿ. | ಮೋಳಿಗೆಯ್ಯ ಪುರಾಣಸಂ. ೩. ಮತ್ತು ಇನ್ನುಳಿದ ಸಂಬಂಧಿಸಿದ ಗ್ರಂಥಗಳು. |
| ಲಿಂಗಾರತಿಗೆ ರಾಜ್ಯವನೊಪ್ಪಿಸಿ ಪಟ್ಟಗಟ್ಟಿ ಹೊರಬಿದ್ದನು. | ಸಂಬಂಧಿಸಿದ ಸಾಹಿತ್ಯದಲ್ಲಿ ಇದಕ್ಕೆ ಬಹುಮತವಿದೆ. ಅಲ್ಪಮತದಲ್ಲಿ ಜಂಗಮರಿಗೆ ರಾಜ್ಯ ದಾನಮಾಡಿದನೆಂದಿದೆ. ಹಾಗೆ ಮಾಡುವದು ಜಂಗಮರು ಸ್ವೀಕರಿಸುವದು ಅಸಮಂಜಸವಾಗಿದೆ. |
| ಮಹಾದೇವರಾಜ - ಗಂಗಾದೇವಿಯರು ರಾಜ್ಯತ್ಯಾಗ ಮಾಡಿಹೊರಟಾಗ ಹೆಸರು ಬದಲಿಸಿಕೊಂಡರು. | ಪೂರ್ವಾಶ್ರಯದ ನೆನಪು ಮರೆಮಾಜಲು ಆಕಸ್ಮಿಕ ಸಂದರ್ಭಗಳಲ್ಲಿ ಮುಂದೆ ಬಂದ ಹೆಸರು ಧರಿಸಿದರು. |

| | |
|---|---|
| ಮಾರಯ್ಯನವರಿಗೆ ಕಾಶ್ಮೀರದಲ್ಲಿಯೇ ಲಿಂಗಧಾರಣೆಯಾಯಿತು. | ಡಾ. ಫ. ಗು. ಹಳಕಟ್ಟಿ, ಶ್ರೀ ಸಂ. ಶಿ. ಭೂಸನೂರಮಠ, ಶ್ರೀ ಎರೆಸೀಮೆ ಚೆನ್ನಬಸವೇಶ್ವರ ಇವರು ಸಂಶೋಧನ ದೃಷ್ಟಿಯಿಂದ ವಿವೇಚಿಸಿ ನಿರ್ಧರಿಸಿದ್ದಾರೆ. |
| ನಿಃಕಳಂಕ ಮಲ್ಲಿಕಾರ್ಜುನರೆಂಬವರು ಮಾರಯ್ಯ-ಮಹಾದೇವಿಯವರ ಗುರುಗಳು. | ಇವರ ವಚನಗಳ ಮುದ್ರಿಕೆ, ಉಪಾಸ್ಯಲಿಂಗ--ಐಕ್ಯಲಿಂಗಗಳ ಹೆಸರು ನಿಃಕಳಂಕ ಮಲ್ಲಿಕಾರ್ಜುನ ಎಂದಿವೆ. ಅವು ಗುರುವಿನ ಹೆಸರಿನಿಂದಲೇ ಬಂದುದಾಗಿರಬೇಕು. ಇಲ್ಲದಿದ್ದರೆ ಈ ಹೆಸರುಗಳಿಗೆ ಬೇರೆ ಹಿನ್ನೆಲೆ ಇರಬೇಕಾಗಿತ್ತು ಅದಿಲ್ಲ.<br>ಆ ಭಾಗದಲ್ಲಿ ಸಂಚರಿಸಿ ಯೋಗಮಾರ್ಗ ಬೋಧಿಸಿದ ಪ್ರಭುದೇವರ ಪ್ರಜ್ಞಾವಂತ ಪ್ರಶಿಷ್ಯರು ನಿಃಕಳಂಕ ಮಲ್ಲಿಕಾರ್ಜುನರು ಆಗಿರಬಹುದು<br>ಅನೇಕ ಶರಣರು ಗುರುಗಳ ಹೆಸರನ್ನು ತಮ್ಮ ವಚನಗಳ ಮುದ್ರಿಕೆ ಮಾಡಿಕೊಂಡಿದ್ದಾರೆ. ಉದಾ: ಅಖಂಡೇಶ್ವರ, |
| ಮಾರಯ್ಯನವರಿಗೆ ಕಾಶ್ಮೀರದಲ್ಲಿರುವಾಗಲೇ ಕನ್ನಡ ಭಾಷೆಯ ಪರಿಚಯವಿತ್ತು. | ಶತಮಾನಗಳಿಂದಲೂ ಕರ್ನಾಟಕದ ಜನರ ಸಂಪರ್ಕ ಕಾಶ್ಮೀರಕ್ಕಿತ್ತು. ವರ್ತಕರು ರಾಜರನ್ನು ಕಾಣುತ್ತಲೂ ಇದ್ದರು. |
| ಮಾರಯ್ಯ ಕಟ್ಟಿಗೆ ಕಾಯಕ ಕೈಕೊಂಡರು. ಮಹನುನೆಯುಲ್ಲಿರದೆ ಕಲ್ಯಾಣದ ಹೊರವಲಯದಲ್ಲಿದ್ದರು. | ಇದು ಸಂಬಂಧಿಸಿದ ಎಲ್ಲ ಗ್ರಂಥಗಳಲ್ಲಿಯೂ ಒಮ್ಮತದ ಅಭಿಪ್ರಾಯವಾಗಿದೆ. |
| ಅಕ್ಕಮಹಾದೇವಿಯಂತೆ ತಾರುಣ್ಯದಲ್ಲಿಯೇ ವೀರವೀರಾಗಿಣಿಯಾಗಿ ಕಲ್ಯಾಣದಲ್ಲಿ ಬಂದು ನಿಂತ ಬೊಂತಾದೇವಿ, ನಿಜದೇವಿಯೆಂಬ ಕಾಶ್ಮೀರದ ರಾಜಪುತ್ರಿ ನಿಜ!<br>ಆದರೆ ಮಹಾದೇವರಾಜನ ತಂಗಿಯಲ್ಲ. | ವೀರಶೈವ ಸಾಹಿತ್ಯಗ್ರಂಥಗಳಲ್ಲಿ ಬೊಂತಾದೇವಿಯ ಚರಿತ್ರೆ ಸ್ವತಂತ್ರವಾಗಿ ಬಂದಿದೆ. ಕಾಶ್ಮೀರದ ರಾಜಪುತ್ರಿಯೆಂದು ಮಾತ್ರ ಹೇಳಲ್ಪಟ್ಟಿದೆ. ಡಾ. ಫ. ಗು. ಹಳಕಟ್ಟಿಯವರು ಮಾರಯ್ಯ |

| | |
|---|---|
| | ದವರು ಎಂಬ ಕಾರಣದಿಂದ ರಾಜಪುತ್ರಿ ನಿಜದೇವಿ (ಬೋಂತಾದೇವಿ) ಮಾರಯ್ಯನ ತಂಗಿ ಎಂದು ಊಹಿಸಿದಂತಿದೆ. ಆದರೆ ಹಾಗಿರಲಾರದು. ಇದ್ದರೆ ಉಭಯತರ ಚರಿತ್ರೆಗಳು ಸ್ವಲ್ಪಾದರೂ ಸಮಾವೇಶಗೊಳ್ಳುತ್ತಿದ್ದವು. ಅದು ಎಲ್ಲಿಯೂ ಇಲ್ಲ. |
| ಮಹಾದೇವರಾಜಸಿಂಪ ಅವನ ಸೇನಾನಿ ಕಲ್ಯಾಣಕ್ಕೆ ಕಳಿಸಲ್ಪಟ್ಟಿದ್ದನು. | ಮೋಳಿಗೆಯ್ಯ ಪುರಾಣ ಮೊದಲುಗೊಂಡು ಸಂಬಂಧಿಸಿದ ಎಲ್ಲ ಗ್ರಂಥಗಳು |
| ಅವನು ಬೇಡಪಡೆಯ ದಳಪತಿ (ಭಟನಾಯಕ.) | ಸಂಬಂಧಿಸಿದ ಗ್ರಂಥಗಳು. |
| ಅವನ ಹೆಸರು ನಿಜಲಿಂಗ. | ಗ್ರಂಥಗಳು ಹೇಳುವ ಚೋರಚಿಕ್ಕಯ್ಯ ಹೆಸರಿರಲಾರದು. ಕನ್ನಡ ಅರ್ಥಪೂರ್ಣ 'ಚಿಕ್ಕಯ್ಯ ಹೆಸರು ಕಾಶ್ಮೀರದಲ್ಲಿ ಇಡಲ್ಪಟ್ಟಿರುವದು ಅಸಮಂಜಸ! ಬಸವಣ್ಣನವರಿಂದ ಚಿಕ್ಕಯ್ಯನೆಂದು ಗೌರವಿಸಲ್ಪಟ್ಟ ಮೇಲೆ 'ನಿಜಲಿಂಗ ಚಿಕ್ಕಯ್ಯ ಎಂಬ ಹೆಸರಿನ ಶರಣನಾದನು. |
| ಕಾಶ್ಮೀರದೆ ಜಂಗಮರು ಕಲ್ಯಾಣಕ್ಕೆ ಹೋದರು. | ಈ ವಿಷಯದ ಸಕಾರಣವಿವೇಚನೆ ಮೇಲೆ ಬಂದಿದೆ. ಚೋರಬಸವ ಪುರಾಣದ 'ಬಸವಣ್ಣನವರ ಹಸಿಬೆಯ ಪವಾಡವೂ ಇದನ್ನು ಸೂಚಿಸುವದು. ಜಂಗಮರು ಹೋದುದೇ ಬಸವಣ್ಣನವರ ವಿಚಾರಕ್ರಾಂತಿಯನ್ನು ಮಾರಯ್ಯ ಗಮನಿಸಲು ಕಾರಣವಾಯಿತು. |
| ಮಾಂಡವ್ಯಪುರದಲ್ಲಿಯೇ ಬಸವಣ್ಣನವರ ಕತೆ ಕೇಳಿದರು. | ಇದು ಮಾರಯ್ಯನವರ-ಮಹಾದೇವಿಯಮ್ಮನವರ ವಚನಗಳಲ್ಲಿಯೇ ಪ್ರಸ್ತಾಪಿತವಾಗಿದೆ. |

ವೀರಬಣಂಜುಗಳು, ಪ್ರಭುದೇವರ ಶಿಷ್ಯರು ಕಥಿಸಿರಬೇಕು. ಅದುವೇ ಅವರ ವೈರಾಗ್ಯಕ್ಕೆ ಕಾರಣ.

ಗಿಝುನಿ ಮಹಮೂದನ ೧೭ ದಾಳಿಗಳು ದಕ್ಷಿಣಕ್ಕೆ ಗುಜರಾಥ, ಪೂರ್ವಕ್ಕೆ ಕನೋಜ, ಆಗ್ನೇಯಕ್ಕೆ ಬುಂದೇಲ (ಕಲಿಂಜರ) ವರೆಗೆ ನಡೆದುದು ಮಧ್ಯಕಾಲದ ಭಾರತದ ಇತಿಹಾಸದ ಪ್ರಸಿದ್ಧ ಸಂಗತಿ.

ಒಂದು ದಾಳಿಯಲ್ಲಿ ಕಲಿಂಜರವನ್ನು ಸೂರೆಗೊಂಡಾಗ ಅಲ್ಲಿಯ ಕಲಚೂರ್ಯ ರಾಜರು ಪದಭ್ರಷ್ಟರಾಗಿ ಹೋದರು. ಅವರು ಚಾಲುಕ್ಯಸಾಮ್ರಾಜ್ಯದಲ್ಲಿ ಆಶ್ರಯ ಪಡೆದು ಮಂಗಳವೇಡೆಯ ಮಂಡಲೇಶ್ವರರಾದರು. ಬಿಜ್ಜಳನ ಪೂರ್ವಜರು ಕಾಲಿಂಜರ ಪುರವರಾಧೀಶ್ವರ ಎಂದು ಬಿರುದು ತಾಳಿದ್ದರು-

(ಕರ್ನಾಟಕ ಗತವೈಭವ,- ಆಲೂರ ವೆಂಕಟರಾವ)

ವಿಜಯನಗರ ಸಾಮ್ರಾಜ್ಯ ಕಾಲದವರೆಗೆ ಕರ್ನಾಟಕದ ರಾಜಧಾನಿಗಳಲ್ಲಿ ವಜ್ರ ಮುತ್ತು ಮಾಣಿಕಗಳನ್ನು ಬಯಲಂಗಡಿಗಳಲ್ಲಿ ಚಾಪೆಯ ಮೇಲೆ ಗುಂಪೆಯಾಗಿಟ್ಟು ಮಾರುತ್ತಿದ್ದರೆಂದು ವಿದೇಶೀಯ ಪ್ರವಾಸಿಗಳು ಬರೆದಿಟ್ಟುದರಿಂದ ತಿಳಿಯುತ್ತದೆ.

(೫) ಭಾರತದ ವಾಯುವ್ಯ ಭಾಗವು ಮುಸಲಾನರ ದಾಳಿಗಳಿಂದ ರಾಜಕೀಯ ಅಭದ್ರತೆಗೊಳಗಾಗಿತ್ತು.

ವಜ್ರಗಳನ್ನು ಬಳ್ಳದಿಂದ ಅಳೆಯುತ್ತಿದ್ದರು.

## 'ಬಸವರಾಜದೇವರು' ಬಗೆಗೆ
## ವಿದ್ವಾಂಸರಿಬ್ಬರ ಸ್ವಪ್ರೇರಿತ ಪತ್ರಗಳು

೧

............ತಾವು ಈ ಗ್ರಂಥರಚಿಸಿ ಕೃತಕೃತ್ಯರಾಗಿದ್ದೀರಿ, ತಮ್ಮ ಭಾಷೆ ಸತ್ವಪೂರ್ಣವಾಗಿದೆ. ಶೈಲಿಯು ಲಲಿತವೂ, ಮಧುರವೂ, ಮೋಹಕವೂ ಆಗಿದೆ. ಸಂದರ್ಭವಿವರಣೆಗೆ-ತತ್ವಗಳ ನಿರೂಪಣೆಗೆ ತಾವು ಬಳಸಿಕೊಂಡ ಕಥಾನಕ ರೀತಿ ಯಶಸ್ವಿಯಾಗಿದೆ. ೧೯ ಅಧ್ಯಾಯಗಳಲ್ಲಿ ಬಸವಣ್ಣನವರ ಜೀವನ, ಸಂದೇಶ, ಲಿಂಗವಂತ ತತ್ವಜ್ಞಾನ, ಷಟ್‌ಸ್ಥಲಾಚರಣೆ, ಶರಣರಿಂದಾದ ಲೋಕಕಲ್ಯಾಣ ಇವೆಲ್ಲವನ್ನು ಸಂಗ್ರಾಹ್ಯವಾಗಿ ಓದುಗರ ಹೃದಯಕ್ಕೆ ತೃಪ್ತಿಯೆನಿಸುವಷ್ಟು ಬರೆದಿದ್ದೀರಿ, ಶರಣ-ಶರಣೆಯರ ಪೂರ್ವಾಶ್ರಯವಿವರ, ಕೈಕೊಂಡ ಕಾಯಕಗಳು ಇವುಗಳ ಬಗ್ಗೆ ಕೊಟ್ಟಪಟ್ಟಿ ಜಿಜ್ಞಾಸುವಿಗೆ, ಸಂಶೋಧಕರಿಗೆ ಬಹು ಉಪಯುಕ್ತವಾಗಿವೆ. ಪ್ರಕರಣಗಳಿಗೆ ಕೊಟ್ಟ ತಲೆಬರೆಹಗಳು ಅರ್ಥಪೂರ್ಣವಾಗಿವೆ, ಧ್ವನಿಪೂರ್ಣವೂ ಆಗಿವೆ. ತಮ್ಮ ಆಳವಾದ ಅಭ್ಯಾಸ, ತಮ್ಮ ಸಂಶೋಧನೆಯ ಫಲ !

ಶರಣರನ್ನೂ ಅವರ ತತ್ವಗಳನ್ನೂ ಅರಿತು ನುಡಿದ ದಿಟ್ಟತನದ ನುಡಿಗಳು, ಲೇಖಕನಿಗೆ ಇರಬೇಕಾದ ಋಜತೆ, ಪ್ರಾಮಾಣಿಕತೆ ಇವೆಲ್ಲವುಗಳನ್ನೊಳಗೊಂಡ ಈ ಉದ್ಗ್ರಂಥ ಕನ್ನಡ ಸಾಹಿತ್ಯಕ್ಕೆ ಬಹು ಬೆಲೆಯುಳ್ಳ ಕಾಣಿಕೆ !

ವಚನಗಳು ಯಾವದರ ಪಡಿನೆಳಲಲ್ಲ; ಅವು ಶರಣರ ಸ್ವತಂತ್ರ ರಚನೆಗಳು. ಈ ಮಾತನ್ನು ತಾವು ಧೀರೋದಾತ್ತವಾಗಿ ಪಂಡಿತರು ಮೆಚ್ಚುವಂತೆ ಹೇಳಿದ್ದೀರಿ,..........................................................

ರಾಯಚೂರ ಶಾಂತರಸ ರಾಯಚೂರು

೨೮—೭—೬೭

೨

............'ಬಸವರಾಜ ದೇವರು' ಪುಸ್ತಕವನ್ನು ಪುನಃ ಪುನಃ ಓದ
ಬೇಕೆಂದು ಅನಿಸುತ್ತದೆ. ೩-೪ ಸಲ ಓದಿದೆ.

ಇದೊಂದು ಅಮೌಲ್ಯಕೃತಿ! ಐತಿಹಾಸಿಕತೆಯ ಆಧಾರದ ಮೇಲ
ನಿಂತ ಅಮರಕೃತಿ! ಬಸವಣ್ಣನವರನ್ನು ಜನಸಾಮಾನ್ಯರ ಮಧ್ಯದಲ್ಲಿ ತಂದ
ಅವರ ದಿವ್ಯಜೀವನದ ಪರಿಮಳವನ್ನು ಸರ್ವರಿಗೂ ಸುಲಭವಾದ ರೀ
ಯೊಳು ಸಲ್ಲಿಸಿದ ಶ್ರೇಷ್ಠಕೃತಿ! ಪವಾಡಗಳ ಪಂಜರದಿಂದ ಬಸವಣ್ಣನವರನ
ಬೈಲಿಗೆ ತಂದು ಅವರ ನೈಜ ಘನವ್ಯಕ್ತಿತ್ವವನ್ನು ನೋಡಿ ಯಾರಾದರೂ
ಬೆರಳು ಕಚ್ಚುವಂತೆ ಮಾಡಿದ್ದು ನಮ್ಮ ಸಮಾಜದ ಪುಣ್ಯ! ಬಸವಣ್ಣನವ
ಜೀವನ ನಿರೂಪಣೆಯಲ್ಲಿ ವಾಸ್ತವಿಕತೆಯು ಹಾಸುಹೊಕ್ಕಾಗಿ ಹೆಣೆಯಲ್ಪಟ್ಟಿದೆ
ಜೊತೆಗೆ ಲಿಂಗವಂತಿಕೆಯು ತತ್ವಾಚರಣೆಯು ಬಸವಣ್ಣನವರ ಜೀವ
ಪ್ರಯೋಗಶಾಲೆಯಲ್ಲಿ ತನ್ನ ಪರಾಕಾಷ್ಟತೆಗೆ ತಲುಪಿದೆ. ಸತ್ಯ-ಪ್ರೇಮ-ತ್ಯಾ
ಈ ಮೂರರ ಏರಕವೇ ಬ. ಸ. ವ ಎಂಬ ಸಿದ್ಧಾಂತ ಸಲೀಲವಾಗಿ ಸ್ಥಿರ
ಕರಿಸಲ್ಪಟ್ಟಿದೆ. ಲಿಂಗಾಂಗಸಾಮರಸ್ಯವನ್ನು ಸಾಧಿಸಲು ಬಸವಣ್ಣನವರ
ಪ್ರಯೋಗಿಸಿದ ಪ್ರಮೇಯ ಹೊಚ್ಚಹೊಸದು. ಗುಣವಂತರು ಪತಿತರನ
ಅಂದರೆ ಹಿಂದುಳಿದವರನ್ನು ಸರ್ವತೋಮುಖವಾಗಿ ಸುಧಾರಿಸಿ, ತಮ
ಸರಿಸಮರನ್ನಾಗಿ ಮಾಡಿ ಅವರೊಡನೆ ಬೆರತು ಒಂದಾಗಿ ಚಂದಾಗಿ ಬಾ
ಬೆಳಗುವದೇ ಸಮರಸ (ಅಸಮರಸವಲ್ಲ) ವೆಂಬದನ್ನು ಬಸವಣ್ಣನವರು ನಡೆದ
ತೋರಿಸಿದ್ದಾರೆ; ಇದುವೇ ಶರಣಧರ್ಮ!

ಇನ್ನು ಈ ಗ್ರಂಥದಲ್ಲಿ ಒಂದರ ಮೇಲೊಂದು ಬಂದ ಅಧ್ಯಾಯಗಳ
ಬಸವಣ್ಣನವರ ವ್ಯಕ್ತಿತ್ವವನ್ನು ಹಂತಹಂತವಾಗಿ ಮೇಲಕ್ಕೆ ಒಯ್ದು ಪರಿಪ
ೂರ್ಣತೆಗೆ ಮುಟ್ಟಿಸಿವೆ.

ಆರ್ಥಿಕ ಯೋಜನೆಯ ಪುನರ್ಘಟನೆಯೆಂಬ ೬ನೆಯ
ಅಧ್ಯಾಯವು ಮನೋಹರವೂ ಮಾರ್ಮಿಕವೂ ಆಗಿದೆ. ಅಲ್ಲದೆ. ಮಾಗ
ದರ್ಶಕವೂ ಆಗಿದೆ. ಸತ್ಯನಿಷ್ಠರಾದ ಬಸವಣ್ಣನವರು ಕಠೋರಸತ್ಯವನ
ಬಹುನಯವಾಗಿ ಸವಿಯಾಗಿ ಮಂಡಿಸಿದ್ದಾರೆ. ಅಂಜಲಿಲ್ಲ ಅಳುಕಲಿಲ್ಲ ರಾಜವ
ನ್ನಣೆಗೆ ಹೊರಗಾಗಲಿಲ್ಲ. ಇದುವೇ ಸತ್ಯಸಂಧರ ಕಾರ್ಯನಿರ್ವಹಣೆಯ
ಜಾಣತನ!

ವಿಶ್ವಪ್ರೇಮಿಗಳಾದ ಬಸವಣ್ಣನವರು ಹಿಪ್ಪರಗಿಯಲ್ಲಿ ಬೋಧಿಸಿ
ಮೂರು ದಿನಗಳ ಪ್ರವಚನವು (ಅ, ೯) ಅವರ ಜನಾನುರಾಗವನ್ನು ಹೆಚ್ಚಿಸ

ತ್ತಿದೆ. ಭಕ್ತಿಯೇ ಮಾನವನ ಉನ್ನತ ಸಾಧನಸಂಪತ್ತೆಂಬ ಅಣ್ಣನವರ ಅಮರ ವಾಣಿಯು ಸರ್ವರಹೃದಯಮಂದಿರಗಳಲ್ಲಿ ಸದಾ ಮೊಳಗುವಂತಾಗಿದೆ. ಕೆಲವು ಸ್ವಾರ್ಥಿಗಳ ಕೈಚಳಕದಿಂದ ಉಳಿದುಕೊಂಡು ಬಂದಿದ್ದ ವರ್ಣ ಧರ್ಮದ ಹಿಂಸಾಪ್ರವೃತ್ತಿಯನ್ನು ಅಣ್ಣನವರು ಸಾಧಾರವಾಗಿ ಖಂಡಿಸಿದ್ದಾರೆ.

ಸರ್ವರಿಗೂ ಸ್ವಾತಂತ್ರ್ಯವನ್ನೂ ಸಮಾನತೆಯನ್ನೂ ನೀಡಿ ಕಾಪಾಡುವ ಶರಣ ಧರ್ಮದ ಪರಿಪಾಲನೆಗಾಗಿ ಅತಿವರ್ಣಿಗಳಾದ ಲಿಂಗವಂತರು ಎಂಥ ತ್ಯಾಗಕ್ಕಾದರೂ ಹಿಂಜರಿಯರೆಂಬದಕ್ಕೆ ಹರಳಯ್ಯ-ಮಧುವಯ್ಯ ಶೀಲವಂತಯ್ಯ ಇವರ ಬಲಿ ದಾನವೇ ಸಾಕ್ಷಿ!

ಇನ್ನು ಬಸವಣ್ಣನವರ ಜೀವನನೌಕೆಯ ಮಾರ್ಗದಲ್ಲಿ ಪರಮ ಪೂಜ್ಯ ಜಾತವೇದಿ ಮುನಿಗಳು ಹೋಕಾಯಂತ್ರ ದಂತಿದ್ದಾರೆ. ನಾಗಲಾಂಬೆ ಅದರ ಚುಕ್ಕಾಣಿ (ದಿಕ್ಕು ಬದಲಿಸುವ ಹುಟ್ಟು) ಇದ್ದಂತೆ ಇದ್ದಾರೆ.

.................ನಿಮ್ಮ ಭಾಷಾಶೈಲಿ, ನೀವು ಬಳಸಿದ ಪದಪ್ರಯೋಗ, ಸನ್ನಿವೇಶಕ್ಕೆ ತಕ್ಕಾಗಿ ಜೋಡಿಸಿದ ವಚನಗಳ ಆಯ್ಕೆ, ಪಾತ್ರಗಳ ನಿರೂಪಣೆ, ವಿಷಯ ವಿವೇಚನೆ, ವಿವರಣೆಗಳಿಗೆ ಬೇಕಾದ ಗಾಂಭೀರ್ಯ ಜಾಣ್ಮೆ ಕಲೆ ಇವು ನಿಮ್ಮ ಅಂಗೈನೆಲ್ಲಿಯಾಗಿ ಪರಿಣಮಿಸಿವೆ. .................ಇತ್ಯಾದಿ.

ಕರ್ನಾಟಕ ಯುನಿವ್ಹರ್ಸಿಟಿ — ಈಶ್ವರಪ್ಪ ಶಿ. ಉಮರಾಣಿ B. A.
ಕ್ಯಾಂಪಸ್, ಧಾರವಾಡ ೨೨-೨-೬೯

---

## ಪತ್ರಿಕಾಭಿಪ್ರಾಯ:

............ಬಸವಣ್ಣನವರ ಕುರಿತು ಮೊದಲೆ ಪ್ರಕಟವಾಗಿರುವ ವಿಪುಲ ಸಾಹಿತ್ಯವನ್ನು ಶ್ರೀ ಶಿರಹಟ್ಟಿಯವರು ಅಭ್ಯಾಸಿಸಿ ಅಣ್ಣನವರ ವಿಶಾಲಜೀವನವನ್ನು-ಪಂಡಿತ ಪಾಮರರಿಬ್ಬರಿಗೂ ಮೆಚ್ಚುಗೆಯಾಗುವಂತೆ, ಕಾದಂಬರಿಯ ರೂಪದಲ್ಲಿ ಬಸವಣ್ಣನವರ ಜೀವನಚರಿತ್ರೆಯನ್ನು-ಬರೆದಿದ್ದಾರೆ.

............ಐತಿಹಾಸಿಕ ಘಟನೆಗಳನ್ನು ಕಾದಂಬರಿಯಲ್ಲಿ ಹೆಣೆಯುವಲ್ಲಿ ಲೇಖಕರು ವಿಶೇಷ ಜಾಣ್ಮೆ ತೋರಿಸಿದ್ದಾರೆ. ಬಸವಣ್ಣನವರ ಅವರ ಕಲ್ಯಾಣಕ್ರಾಂತಿಯ ಪರಿಚಯವನ್ನು ಈ ಗ್ರಂಥವು ಮನಮುಟ್ಟುವಂತೆ ಮಾಡಿ ಕೊಡುತ್ತದೆ. ಬಸವಣ್ಣನವರ ಜೀವನವನ್ನು ತಿಳಿಯಾಗಿ ನಿರೂಪಿಸುವ ಈ ಗ್ರಂಥವು ಕನ್ನಡ ಸಾಹಿತ್ಯಕ್ಕೆ ಉಪಯುಕ್ತ ಕೊಡುಗೆಯಾಗಿದೆ.

೯-೧೧ ೬೯ ಕರ್ಮವೀರ —ದ. ಲ. ಕೆ.